ಕಾಯಕವೇ ಕೈಲಾಸ



# ಸಿದ್ಧಗಂಗಾ



## ಕನ್ನಡ ರಾಜ್ಯೋತ್ಸವ ಹಾಗೂ ದೀಪಾವಳಿ ಹಬ್ಬದ ಶುಭಾಶಯಗಳು

ಸಂಪುಟ : ೫೪ ನವೆಂಬರ್ ೨೦೧೮ ಸಂಚಿಕೆ : ೧೧





ಗದಗಿನ ಪರಮಪೂಜ್ಯ
ಡಾ. ಶ್ರೀ ಶ್ರೀ ತೋಂಟದ
ಸಿದ್ಧಲಿಂಗ ಮಹಾಸ್ವಾಮಿಗಳವರು
(೨೧-೨-೧೯೪೯ - ೨೦-೧೦-೨೦೧೮)

ತುಮಕೂರಿನಲ್ಲಿರುವ ಸಿದ್ಧಗಂಗಾ ಆಸ್ಪತ್ರೆ ಹಾಗೂ ಸಂಶೋಧನಾ ಕೇಂದ್ರದ ಪ್ರಥಮ ವಾರ್ಷಿಕೋತ್ಸವದ ಶುಭಸಂದರ್ಭದಲ್ಲಿ ಪದ್ಮಭೂಷಣ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಪಾದಪೂಜೆ ನೆರವೇರಿಸಲಾಯಿತು. ಈ ಸಂದರ್ಭದಲ್ಲಿ ಕಣ್ಣೂರುಮಠದ ಶ್ರೀ ಶ್ರೀ ಮೃತ್ಯುಂಜಯ ಸ್ವಾಮಿಗಳು, ಆಸ್ಪತ್ರೆಯ ವೈದ್ಯರುಗಳಾದ ಡಾ. ಪರಮೇಶ್, ಡಾ. ವೀಣಾ, ಡಾ. ಉಮಾಶಂಕರ್, ಡಾ. ಸ್ವಾಮಿ, ಡಾ. ನಿರಂಜನಮೂರ್ತಿ, ಡಾ. ಭೂಷಣ, ಡಾ. ಚಂದ್ರಶೇಖರ್, ಡಾ. ಭಾನುಪ್ರಕಾಶ್, ಡಾ. ಸುರೇಶ್‌ಬಾಬು, ಡಾ. ಗಿರೀಶ್‌ಚಂದ್ರ, ಡಾ. ಕಿರಣ್ ಖಾನಾಪುರ, ಡಾ. ಶರತ್ ಹಾಗೂ ಸಿಬ್ಬಂದಿಯವರು ಉಪಸ್ಥಿತರಿದ್ದರು.



ಶ್ರೀ ಸಿದ್ಧಗಂಗಾ ಸನಿವಾಸ ಪ್ರೌಢಶಾಲೆಯ ಕ್ರೀಡಾಪಟುಗಳು ಕಬ್ಬಡಿ ಸ್ಪರ್ಧೆಯಲ್ಲಿ ರಾಜ್ಯಮಟ್ಟದಿಂದ ರಾಷ್ಟ್ರಮಟ್ಟಕ್ಕೆ ಆಯ್ಕೆಯಾದ ಶುಭ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನ ಮಾಡಿ ದಿವ್ಯಾಶೀರ್ವಾದ ಪಡೆದರು.



ಮೈಸೂರು ದಸರ ಸಂದರ್ಭದಲ್ಲಿ ತುಮಕೂರು ಜಿಲ್ಲಾ ಪಂಚಾಯತ್ ವತಿಯಿಂದ ಪ್ರದರ್ಶಿತವಾದ ಶ್ರೀ ಸಿದ್ಧಗಂಗಾ ಮಠದ ಸ್ತಬ್ಧಚಿತ್ರದ ಒಂದು ಅಪೂರ್ವ ನೋಟ



## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೪ ನವೆಂಬರ್ ೨೦೧೮ ಸಂಚಿಕೆ : ೧೧

## ಒಳಪುಟಗಳಲ್ಲಿ ..................




ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ಕೆ.ಬಿ. ಶಿವಶಂಕರಯ್ಯ

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,
ತುಮಕೂರು-೫೭೨ ೧೦೪.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೨೨೨.



# ಸಂಪಾದಕೀಯ........

ನವೆಂಬರ್ ಒಂದು ಕನ್ನಡಿಗರ ಭಾಗ್ಯೋದಯದ ದಿನ. 'ನಾಡಿನ ಪುಣ್ಯದ ಪೂರ್ವದಿಗಂತದಲ್ಲಿ ನವ ಅರುಣೋದಯವಾಗುತಿದೆ' ಎಂದು ಕವಿ ಕುವೆಂಪು ಹಾಡಿದರೆ 'ಉದಯವಾಯಿತು ಚೆಲುವ ಕನ್ನಡನಾಡು' ಎಂದರು ಶ್ರೀ ಹುಯಿಲಗೋಳ ನಾರಾಯಣರಾಯರು. ಅಂದಿನಿಂದ ರಾಜ್ಯವನ್ನಾಳಿದ ಮಂತ್ರಿಗಳು, ಕವಿಗಳು, ಕಲಾವಿದರು, ನಾಟಕಕಾರರು, ಗ್ರಾಮೀಣ ಬಂಧುಗಳು, ನಾಡಿನ ಅಭ್ಯುದಯಕ್ಕಾಗಿ ದುಡಿಯುತ್ತ ಬಂದಿದ್ದಾರೆ.

ಪ್ರಾಕೃತಿಕ ಸಂಪತ್ತಿನ ಸೊಬಗನ್ನು ಸಾರುತ್ತಿವೆ. 'ಅಗುಂಬೆ ಅಸ್ತಮಯ, ದ್ರೋಣಪರ್ವತದುದಯ' ಜೋಗದ ಜಲಪಾತ, ಶಿವನಸಮುದ್ರ, ಕೋಲಾರದ ಚಿನ್ನದಗಣಿ, ಬಸವಕಲ್ಯಾಣ, ಬೀದರಿನ ದರಿಯಾಗಂಜ್, ಭಾಲ್ಕಿಯ ಶ್ರೀಗಳ ಕನ್ನಡಪ್ರೇಮ, ಸೊಲ್ಲಾಪುರದ ಸಿದ್ಧರಾಮ ಗದ್ದುಗೆ, ಅಕ್ಕಮಹಾದೇವಿಯ ಉಡುತಡಿ, ಬಸವಕಲ್ಯಾಣ, ಕೂಡಲಸಂಗಮ, ಸುತ್ತೂರು ಶ್ರೀಕ್ಷೇತ್ರ, ಮಲೆಯ ಮಾದೇಶ್ವರ ಶ್ರೀಗಿರಿ, ಉಳವಿ, ಎಣ್ಣೆಹೊಳೆ, ಯಳನಾಡು, ಶಿವಗಂಗೆ, ಸಿದ್ಧಗಂಗೆ ಮೊದಲಾದ ಪುಣ್ಯಕ್ಷೇತ್ರಗಳಿಂದ ಶೋಭಿಸುತ್ತಿದೆ.

ಕನ್ನಡನಾಡನ್ನು ಕರ್ನಾಟಕವನ್ನು ಕಟ್ಟಿದ, ಆಳಿದ ಮಂತ್ರಿಮಹೋದಯರು ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ರಾಮಕೃಷ್ಣಹೆಗಡೆ, ಶ್ರೀ ದೇವರಾಜು ಅರಸು, ಶ್ರೀ ಗುಂಡೂರಾಯರು, ಶ್ರೀ ಹೆಚ್.ಡಿ. ದೇವೇಗೌಡ, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಬಿ.ಎಸ್. ಯಡಿಯೂರಪ್ಪ, ಶ್ರೀ ಹೆಚ್.ಡಿ. ಕುಮಾರಸ್ವಾಮಿ ಶ್ರೀ ಬಸವರಾಜ ಬೊಮ್ಮಾಯಿ, ಶ್ರೀ ಸಿದ್ಧರಾಮಯ್ಯ, ಮುಂತಾದ ರಾಜಕಾರಣಿಗಳು.

ಸಾಹಿತ್ಯ ಕ್ಷೇತ್ರದ ಶ್ರೇಷ್ಠರಾದ ಜ್ಞಾನಪೀಠಪುರಸ್ಕೃತರಾದ ಸಾಹಿತಿಗಳು, ಪತ್ರಕರ್ತರಾದ ನಾಡೋಜ ಪಾಟೀಲ ಪುಟ್ಟಪ್ಪ, ಶ್ರೀರಾಮಚಂದ್ರರಾಯ ಮುಂತಾದವರು, ಕಲಾವಿದರಾದ ಶ್ರೀ ಗುಬ್ಬಿವೀರಣ್ಣನವರು, ಶ್ರೀ ಸುಬ್ಬಯ್ಯ ನಾಯ್ಡು, ಡಾ. ರಾಜ್‌ಕುಮಾರ್, ಶ್ರೀ ನಾಗೇಂದ್ರರಾಯರು ನಾಡಿನ ಸೊಬಗು ಸಿರಿಗೆ ಕಾರಣರಾಗಿದ್ದಾರೆ. ಶ್ರೀಮತಿ ಸಾಲುಮರದ ತಿಮ್ಮಕ್ಕ, ಸೂಲಗಿತ್ತಿ ನರಮ್ಮ, ಸಿರಿಯಜ್ಜಿರವರಂಥ ಜಾನಪದ ಪುಣ್ಯತಾಯಿಯವರು, ಕಾವೇರಿ, ತುಂಗಭದ್ರೆ, ಕಪನಿಯರಂಥ ನದಿಗಳು ನಾಡಿನ ಸೊಬಗು ಸೌಂದರ್ಯವನ್ನು ಹೇಳುತ್ತಿವೆ. 'ಕನ್ನಡದ ಪುಲ್ಲೆನಗೆ ಪಾವನ ಶ್ರೀ ತುಲಸಿ' ಎಂಬ ಭಕ್ತಿಕವಿಗಳ ನಾಡು, ಪಂಪ, ರನ್ನ, ಪೊನ್ನ, ಹರಿಹರ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ಜನ್ನ, ರತ್ನಾಕರ, ಕುವೆಂಪು, ಡಿ.ವಿ. ಗುಂಡಪ್ಪ, ಬೇಂದ್ರೆ, ಪುತಿನ, ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ವಿ.ಕೃ. ಗೋಕಾಕ್, ಚೆನ್ನವೀರ ಕಣವಿ, ಡಾ. ಹೆಚ್. ತಿಪ್ಪೇರುದ್ರಸ್ವಾಮಿ, ಡಾ. ಎಂ. ಚಿದಾನಚಿದಮೂರ್ತಿ, ಡಾ ಚಂದ್ರಶೇಖರ ಕಂಬಾರ, ಚಂದ್ರಶೇಖರ ಪಾಟೀಲರು, ಡಾ. ಗೊ.ರು. ಚನ್ನಬಸಪ್ಪನವರು ಬಾಳಿ ಬದುಕಿರುವ ನಾಡು ಕರ್ನಾಟಕ.

ಇಹಲೋಕವನ್ನು ತ್ಯಜಿಸಿ ಲಿಂಗದೊಳಗಾದ ಗದಗದ ಶ್ರೀ ತೋಂಟದಾರ್ಯಮಠದ ಪೂಜ್ಯ ಶ್ರೀ ತೋಂಟದಾರ್ಯ ಡಾ. ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳ ಆತ್ಮಕ್ಕೆ ದಯಾಮಯನಾದ ಪರಶಿವನು ಶಾಂತಿಯನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತದೆ. ಶ್ರೀಮಠದ ವಿದ್ಯಾರ್ಥಿಯಾಗಿದ್ದ, ಹಳೆಯ ವಿದ್ಯಾರ್ಥಿಗಳ ಸಂಘದಿಂದ 'ಸಂಘಸಿರಿ' ಪ್ರಶಸ್ತಿ ಪುರಸ್ಕೃತರಾದ ಶ್ರೀ ವಿ.ಪಿ. ಗಂಗಣ್ಣ ಅವರು ೧೯-೧೦-೨೦೧೮, ಹಲವಾರು ದಶಕಗಳಿಂದ ಸಿದ್ಧಗಂಗಾ ಮಾಸಪತ್ರಿಕೆಯ ಪ್ರಕಾಶಕರಾಗಿ ಅನುಪಮ ಸೇವೆ ಸಲ್ಲಿಸಿದ ಶ್ರೀ ಹೆಚ್.ವಿ. ಗಂಗಾಧರಯ್ಯನವರು ದಿನಾಂಕ ೨೦-೧೦-೨೦೧೮ ಹಾಗೂ ಸಮಾಜಶಾಸ್ತ್ರ ತಜ್ಞ, ಚಿಂತಕ, ನಾಡುನುಡಿಯ ಬಗ್ಗೆ ಅಪಾರ ಕಳಕಳಿಯನ್ನು ಹೊಂದಿದ್ದ ಡಾ. ಹೆಚ್.ಎಂ. ಮರುಳಸಿದ್ಧಯ್ಯನವರು ದಿನಾಂಕ ೨೭-೧೦-೨೦೧೮ ರಂದು ಶಿವೈಕ್ಯರಾದುದನ್ನು ತಿಳಿದು 'ಸಿದ್ಧಗಂಗಾ' ವಿಷಾದಿಸುತ್ತ, ಮೃತರ ಆತ್ಮಕ್ಕೆ ಸಿದ್ಧಗಂಗಾ ಗುರುಪರಂಪರೆ ಶಾಂತಿಯನ್ನು ಕೊಡಲೆಂದು ಬೇಡುತ್ತದೆ.

ರಾಜ್ಯೋತ್ಸವ ಹಾಗೂ ದೀಪಾವಳಿ ಹಬ್ಬದ ಶುಭಾಶಯಗಳನ್ನು 'ಸಿದ್ಧಗಂಗಾ'ದ ಎಲ್ಲ ಬಂಧುಭಗಿನಿಯರಿಗೆ ಕೋರುತ್ತದೆ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು







## ಶ್ರೀವಾಣಿ

# ಬಸವಣ್ಣ – ಲೋಕಕಂಡ ಅದ್ಭುತ ಬೆಳಗು

'ಬಸವ ಬೆಳಗು' ಒಂದು ಭಕ್ತಿಕಾವ್ಯ. ಡಾ. ರೇವಣಸಿದ್ಧಪ್ಪ ಚೆನ್ನಪ್ಪ ಮುದ್ದೇಬಿಹಾಳರಿಂದ ರಚಿತವಾದ ಮಹಾಕಾವ್ಯ. ಭಕ್ತಿಯ ಅಭಿವ್ಯಕ್ತಿಗೆ ಹಲವು ಮಾರ್ಗಗಳು. ಕಾವ್ಯಸೃಷ್ಟಿಯೂ ಆ ಮಾರ್ಗಗಳಲ್ಲಿ ಒಂದು. ಶ್ರೇಷ್ಠವಾದ, ಅನನ್ಯವಾದ ಮಾರ್ಗವೆಂದೇ ಪ್ರಸಿದ್ಧ. ಭಕ್ತಿಯಲ್ಲಿ ಅರಿವು, ಆನಂದ, ಅನುಭಾವಗಳು ಸಂಗಮಿಸಿರುತ್ತವೆ. ಅರಿವು ಮಾನವೀಯತೆಯ ಮಹಾಗಾನವನ್ನೇ ನುಡಿಯುತ್ತವೆ. 'ಅನುಭಾವವೆಂಬುದು ಅಂತರಂಗದರತ್ನ' ಎಂದಿದ್ದಾರೆ ಶರಣರು. ಅಂತರಂಗದ ಅನುಭವಗಳಿಗೆ ರೂಪು ನೀಡಿದ ದಾಸೋಹ ಪುಣ್ಯಶೀಲರು ಬಸವಾದಿ ಪ್ರಮಥರು. 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ' ವೆಂದು ನಂಬಿ 'ಮರ್ತ್ಯಲೋಕದ ಶಬ್ದಸೋಪಾನ'ವನ್ನು ಕಟ್ಟುವುದರ ಮೂಲಕ ಸಾಹಿತ್ಯದ ಪರಮೋಚ್ಚ ಗುರಿಯನ್ನು ತೋರಿಸಿದ್ದಾರೆ. ಹಾಗೆ ನೋಡಿದರೆ ಅವರು ಕೊಟ್ಟು ಹೋಗಿರುವ ಸಾಹಿತ್ಯಸಿರಿಗಿಂತ ಅವರ ಜೀವನ ದೊಡ್ಡದಾಗಿತ್ತು ಎಂಬುದನ್ನು ನಾವು ಮರೆಯಬಾರದು. ಮಾನವ ಏರಬಹುದಾದ ಎತ್ತರವನ್ನೂ ಅವರು ಆಚರಿಸಿ ತೋರಿಸಿದ ಸತ್ಯಶುದ್ಧ ಕಾಯಕಯೋಗಿಗಳು. ಕಾಯಕ ಅವರಿಗೆ ದೇವಲೋಕವಾಯಿತು. 'ಕಾಯಕವೇ ಶಿವಪೂಜೆ, ಕಾಯಕವೇ ಶಿವಯೋಗ, ಕಾಯಕವೇ ಕಾಯ್ವ ಕೈಲಾಸ' ಎಂದು ನಂಬಿ ನಡೆದರು. 'ಕಾಯಕದಿಂದ ಕೈಲಾಸವಲ್ಲ, ಕಾಯಕವೇ ಕೈಲಾಸ'. ಶರಣರ ನಂಬಿಕೆ. ಅವರು ಮರ್ತ್ಯಲೋಕವನ್ನು ಕಾಯಕದ ಕಮ್ಮಟವೆಂದರು. ಕಮ್ಮಟವೆಂದರೆ ನಾಣ್ಯಗಳನ್ನು ಮುದ್ರಿಸುವ ಟಂಕಸಾಲೆ. ಹೌದು !

ಬಸವಭಕ್ತಿಯ ಬೀಜ ಬಸವಮುಕ್ತಿಯ ತೇಜ
ಬಸವ ಕಾಯಕದಗುರುಬೀಜ ಶಿವಮತಕೆ
ಬಸವನೆ ಶಬ್ದಸೋಪಾನ.

ಉಂಡು ತೇಗಿತು ಲೋಕ ಕೊಂಡಾಡಿ ಕಾಯಕವ
ಕಂಡ ಕಂಡಲ್ಲಿ ದಾಸೋಹ । ಕಾಯಕದ
ಕಂಡ ಜೀವನದ ಶಿವಮಾತು.

ಬಸವಣ್ಣ ಈ ಲೋಕಕಂಡ ಅದ್ಭುತ ಬೆಳಗು. ಆ ಬೆಳಗಿನಲ್ಲಿ ಬಾಳುವುದೇ ಮಹಾಪುಣ್ಯ.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಗುರುವನು ಮಹಾದೇವನನು**
**ಒಂದೇ ಎಂದು ಭಾವಿಸಬೇಕು ನೋಡಾ**
**ಎರಡೆಂಬ ಪ್ರತಿಭಾವ ತೋರಿದರೆ**
**ಅದು ಅಜ್ಞಾನ ನೋಡಾ**
**ಇದು ಕಾರಣ, ಆವನಾವನೋರ್ವನು**
**ಎರಡೆಂದು ಭಾವಿಸಿದನಾದರೆ**
**ಅನೇಕ ಕಾಲ ನರಕದ ಕುಳಿಯಲ್ಲಿಪ್ಪುದು**
**ತಪ್ಪುದು ನೋಡಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಗುರುವನು ಮಹಾದೇವನನ್ನು ಒಂದೆ ಎಂದು ಭಾವಿಸಬೇಕು ನೋಡಾ : ಗುರುವನು - ಶ್ರೀಗುರುನಾಥನನ್ನು, ಮಹಾದೇವನನ್ನು - ಎಲ್ಲಾ ದೇವರಿಗೆ ವಲ್ಲಭವಾದ ಪರಶಿವಲಿಂಗವನು, ಒಂದೇ ಎಂದು - ಒಂದೆ ಸಮಾನವೆಂದು, ಭಾವಿಸಬೇಕು - ಹಿಂಗೆಂದರಿಯಬೇಕು, ನೋಡಾ - ಕಂಡಾ, ಎರಡೆಂಬ - ಗುರುವು ಬೇರೆ, ಮಹಾದೇವನು ಬೇರೆಂಬ, ಪ್ರತಿಭಾವ - ಭಿನ್ನಭಾವವು, ತೋರಿದಡೆ - ಕಾಣಿಸಿದಡೆ, ಅದು ಅಜ್ಞಾನ ನೋಡಾ - ಅದು ಮರವೆ ಜ್ಞಾನವು ಕಂಡಾ, ಇದು ಕಾರಣ - ಇದು ನಿಮಿತ್ಯಾರ್ಥ, ಆವನಾನೋರ್ವನು - ಅವನಾನೊಬ್ಬ ಶಿಷ್ಯೋತ್ತಮನು, ಎರಡೆಂದು, ಗುರುವು ಬೇರೆ ಮಹಾದೇವನು ಬೇರೆಂದು, ಭಾವಿಸಿದನಾದರೆ - ಹೀಂಗೆ ಭಿನ್ನವಿಟ್ಟುಗೊಂಡು ಅರಿದನಾದರೆ, ಅನೇಕ ಕಾಲ - ಅನೇಕ ದಿವಸಪ್ಪ ಅಂತರದಲ್ಲಿ ನರಕದ ಕುಳಿಯಲ್ಲಿಪ್ಪುದು -

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಭಕ್ತಿಯಲಿ ಬಸವೇಶ ಜ್ಞಾನದಲಿ ಪ್ರಭುದೇವ
ಕರ್ಮದಲಿ ಸಿದ್ಧರಾಮನೆನಿಸಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾವಿಘನತೆಯನುಳಿಸಿ ಭಸ್ಮ ಪಾವನನೆನಿಸಿ
ಮತಮಾನ್ಯ ಜಗದೆದೆಯ ಬಲವೆನಿಸಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಿಕ್ಷಕ್ಕೆ ನೀ ಹೊರಟೆ ಲಕ್ಷಜನಗಳ ಪೊರೆದೆ
ಪಕ್ಷಪಾತ ತೊರೆದೆ ಜಗದೊಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರಿಜನ ಗುರುಜನ ಭಿನ್ನಭಾವವ ಕಾಣೆ
ಕರೆವೆ ಸಕಲರ ತಿಳಿದು ಕರುಣೆಯಲಿ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೊಂಗೆಯ ಮರತಂಪು ಬೆಳದಿಂಗಳು ತಂಪು
ಜಂಗಮವೆ ನಿನ್ನನುಡಿ ತಂಪು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಣ್ಣ ಕಟ್ಟಿದ ಕಲ್ಯಾಣಪಟ್ಟಣದಿ
ಚೆಲ್ಲಾಡಿತು ಶಿವಬೆಳಕು ಎಲ್ಲೆಲ್ಲು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದಾಸೋಹ ಷಟ್‌ಸ್ಥಲದ ಶಿವಸಿದ್ಧಿ ಶಿವಶಿಖರ
ದಾಸೋಹವೆ ಜಗದ ಶಿವಬೆಳಕು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಲ್ಲಿದನು ಬಸವೇಶ ಕರುಣಾಳು ಶರಣೇಶ
ಬೆಲ್ಲದಂಥವನು ಎಲ್ಲರಿಗೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವೀರಶೈವಧರ್ಮ ವಿಶ್ವಕ್ಕೆ ಮಾದರಿ
ಅರಿತು ಆಚರಿಸು ನೀನದನು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಕಾಶದಗಲದಿ ನಿನರೂಪ ಪಸರಿಸಿ
ಕೈಯೆತ್ತಿ ಕರುಣೆಯ ಹರಿಸಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



## ಚಿಂತನ

# ಕಾಯಕಯೋಗ-ಪ್ರಸನ್ನತಾ ಪ್ರಸಾದ

- ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಸತ್ಯ ವಸ್ತುವಿನ ಜ್ಞಾನಸಾಧನೆಯಿಂದ, ಏಕಾಗ್ರತಾರೂಪ ಧ್ಯಾನಸಾಧನೆಯಿಂದ, ಹೃದಯದ ಮಾಧುರ್ಯರೂಪ ಭಕ್ತಿ ಸಾಧನೆಯಿಂದ ಭಗವಚ್ಚಿಂತನ ಮಾಡುವುದನ್ನು ನಾವೀಗಾಗಲೆ ನೋಡಿದ್ದೇವೆ. ಭಗವಂತನನ್ನು ನಿರ್ಮಲಮತಿಯಲ್ಲಿ, ನಿಶ್ಚಲ ಮನಸ್ಸಿನಲ್ಲಿ ಹಾಗೂ ಮಧುರ ಹೃದಯದಲ್ಲಿ ಆವಿಷ್ಕರಿಸಿಕೊಳ್ಳುವುದು ಚಿಂತನ.

ಜ್ಞಾನ ಧ್ಯಾನ ಹಾಗೂ ಭಕ್ತಿಗೆ ಹೊರತಾಗಿ ಇನ್ನೊಂದು ಅತ್ಯಮೂಲ್ಯ ಸಾಧನೆಯಿದೆ. ಅದುವೇ 'ಕರ್ಮ!' ಮನ-ಬುದ್ಧಿಗಳ ಬಲವಿಡಿದು ಮಾಡಲಾಗುವ ದೈಹಿಕ ಕಾರ್ಯ ಕರ್ಮವಿದು ಬದುಕಿನ ಪ್ರಧಾನಾಂಶ. ಯೋಗಿಯೇ ಇರಲಿ ರಾಗಿಯೇ ಇರಲಿ, ಕರ್ಮವಿರದಿರಲಾಗದು. 'ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯ ಕರ್ಮಕೃತ್'-ಹೀಗೆ ಹೇಳಿದೆ ಗೀತೆ. ಯಾರು ಯಾವುದೂ ಕರ್ಮವಿಲ್ಲದೆ ಒಂದು ಕ್ಷಣ ಕೂಡ ಬಾಳರು. ಮನುಷ್ಯ ಪಶುಪಕ್ಷಿಯಷ್ಟೇ ಅಲ್ಲ ದೇವನು ಕೂಡ ಕರ್ಮರತ.

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ**

'ಅರ್ಜುನ, ನನಗೇನಿದೆ ಹೇಳು ಕರ್ತವ್ಯ? ಮೂರು ಲೋಕಗಳಲ್ಲಿ ನಾನು ಪಡೆಯಬೇಕಾದ ಅಥವಾ ಪಡೆಯದಿರುವ ವಸ್ತುವಿಲ್ಲ. ನಾನು ಏನನ್ನೂ ಬಯಸುವುದಿಲ್ಲ. ಎಲ್ಲವೂ ನಾನಾಗಿರುವಾಗ, ನನ್ನದಾಗಿರುವಾಗ ಬಯಸುವುದಾದರೂ ಏನನ್ನು! ನಾನು ನಿತ್ಯಪೂರ್ಣ! ತುಂಬಿದ ಸಾಗರ! ಹೀಗಿದ್ದೂ ನಾನು ಕರ್ಮ ಮಾಡುತ್ತೇನೆ!' ಇದು ಗೀತೆಯ ಅಮರ ನುಡಿ.

ನಿಜವಾಗಿ ದೇವನಲ್ಲಿ ಆಸೆಗಳಿರವು, ಎಂದಿಗೂ. ಆದರೆ, ಅಚ್ಚರಿ ಎಂದರೆ ದೇವನಲ್ಲೂ ಇಚ್ಛೆಗಳನ್ನು ಆರೋಪಿಸುತ್ತೇವೆ.

ದೇವನು ನಮ್ಮ ಅನ್ನ, ವಸ್ತ್ರ, ಒಡವೆ, ವೈಭವ ಏನೆಲ್ಲಾ ಕೇಳುತ್ತಾನೆ. ಕೊಟ್ಟರೆ ಸಂತುಷ್ಟ. ಕೊಡದಿದ್ದರೆ ಸಂಕಷ್ಟಗಳ ತರುತ್ತಾನೆ. ಹೀಗೆಲ್ಲ ಭಾವಿಸುತ್ತೇವೆ. ಪಂಚಗವ್ಯಗಳ ಸ್ನಾನವಿಕ್ಕಿ, ವಸ್ತ್ರ ಉಡಿಸಿ ಹೂ ಮುಡಿಸಿ ದೀಪ ಎತ್ತುತ್ತೇವೆ. ಅದು ತಮ್ಮ ಆನಂದಕ್ಕಾಗಿ ಮಾತ್ರ. ಅವನಿಗೆ ಆ ದೀಪ ಏನು? ಸೂರ್ಯ ಚಂದ್ರ ನಕ್ಷತ್ರಗಳು ಆತ ಹಚ್ಚಿದ ನಂದಾದೀವಿಗೆಗಳು! ನಮ್ಮ ಎಣ್ಣೆಯ ಮಿಣುಕು ದೀಪ ಅವನಿಗೆ ಏನು ಅವಶ್ಯ? 'ಅವನಿರುವಲ್ಲಿ ಕತ್ತಲೆ ಇದ್ದರೆ ದೀಪದ ಅಗತ್ಯ. ಆದರೆ ಆತ ಸೂರ್ಯಕೋಟಿ ಸಮಪ್ರಭ! ಇನ್ನು ಆಹಾರ, ನೈವೇದ್ಯ. ಹಸಿದವರಿಗೆ ಅನ್ನ. ದೇವನು ಹಸಿಯುತ್ತಾನೆಯೆ ಪೂರ್ಣಕಾಮನಾದ ಆತನೇ ಹಸಿದರೆ ತೃಪ್ತಿಪಡಿಸುವವರಾರು ವೃಕ್ಷದ ಮಡಿ ಹಸಿದರೆ ನೀರುಣಿಸಬಹುದು. ಸಾಗರವೇ ನೀರಡಿಸಿದರೆ? ಇಲ್ಲ. ದೇವನಿಗೆ ಏನೂ ಬೇಕಿಲ್ಲ. ಅಂದ ಬಳಿಕ 'ಕರ್ತವ್ಯ'ವೆಂಬ ಕರ್ಮ ಹೇಗಿರಲು ಸಾಧ್ಯ? ಹಾಗಾದರೆ ದೇವನು ಅದೇಕೆ ಕರ್ಮಗಳಲ್ಲಿ ರತ? **'ಉತ್ಸೀದೇಯುಃ ಇಮೇ ಲೋಕಾಃ ನ ಕುರ್ಯಾಂ ಕರ್ಮ ಚೇದಹಮ್'**. ಆತ ಕರ್ಮ ಮಾಡದಿದ್ದರೆ ಲೋಕಗಳೆಲ್ಲ ವಿನಷ್ಟವಾಗುವುವು. ಭೂಮ್ಯಾದಿ ಪಂಚಭೂತಾತ್ಮಕ ಸಮಸ್ತ ವಿಶ್ವವೇ ಮರೆಯಾಗುವುದು.

ತೆರೆಗಳ ಬಾಳು ಸಾಗರದ ಮೇಲೆ. ಸಾಗರವೇ ಇಲ್ಲದಿರೆ! ವಿಶ್ವದ ಅಸ್ತಿತ್ವ, ತೋರಿಕೆ-ದೇವನ ಸಂಕಲ್ಪ ಕರ್ಮದ ಮೇಲೆ! ಅವನ ಜ್ಞಾನ ತಪಸ್ಸಿನ ಮೇಲೆ! ಅದು ಪ್ರತಿಕ್ಷಣ ಸಾಗುತ್ತಲಿದೆ. ಹೀಗಿರುವಾಗ 'ಅಕರ್ಮಕೃತ್' ಇರಲು ಆಗದು ಯಾರಿಗೂ. ನಾವು ಕರ್ಮವನ್ನು ತಿರಸ್ಕರಿಸಿ ಜ್ಞಾನವನ್ನು ಅದೆಷ್ಟೇ ಪುರಸ್ಕರಿಸಿದರೂ ಕರ್ಮವಿಲ್ಲದೆ ಬದುಕು ಸಾಗದು, ಇಷ್ಟೇ. ಕೆಲವರ ಕರ್ಮ ಸೂಕ್ಷ್ಮವಿರಬಹುದು; ಕೆಲವರ ಕರ್ಮ ಸ್ಥೂಲವಿರಬಹುದು. ಉದಾಹರಣೆಗಾಗಿ, ಧ್ಯಾನ ಮಾಡುವುದು ಸೂಕ್ಷ್ಮ ಕರ್ಮ. ವ್ಯವಸಾಯ ಮಾಡುವುದು ಸ್ಥೂಲ ಕರ್ಮ. ಏನೇ ಆದರೂ ಕರ್ಮ ಮಾತ್ರ ಬೇಕು, ದೇಹ ಇರುವವರೆಗೆ. ದೇಹ ಅಳಿದು, ಮನಸ್ಸು ಬಯಲಾದ ಬಳಿಕ ನಾನು ನನ್ನಲ್ಲಿ ಅಂದರೆ ಆತ್ಮನಲ್ಲಿ ನೆಲೆಸುತ್ತೇನೆ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಅದು ಕೈವಲ್ಯ. ಆಗ ಮಾತ್ರ ಕರ್ಮವಿಲ್ಲ. ಕೇವಲ ಚೇತನಾಸ್ತಿತ್ವ.

ಅಂಥ ಕೈವಲ್ಯ ಸಮನಿಸುವವರೆಗೆ ಕರ್ಮ ಅತ್ಯಾಜ್ಯ, ಅ-ತ್ಯಜನೀಯ! ಇನ್ನು ಎಲ್ಲ ಕರ್ಮಗಳೂ ಒಂದೇ ಅಲ್ಲ. ಅವುಗಳಲ್ಲಿ ಎರಡು ವಿಧ; ಕೆಟ್ಟ ಕರ್ಮಗಳು(ಅಕರ್ಮ), ಒಳ್ಳೆಯ ಕರ್ಮಗಳು(ಕರ್ಮ) ಎಂದು. 'ಕಿಂ ಕರ್ಮ ಕಿಮಕರ್ಮೇತಿ ಕವಯೋऽಪ್ಯತ್ರ ಮೋಹಿತಾಃ ಯಾವುದು ಕರ್ಮ? ಯಾವುದು ಅಕರ್ಮ? ಎಂಬುದನ್ನು ನಿರ್ಧರಿಸುವುದು ಬಲ್ಲವರಿಗೂ ಕಷ್ಟ! ಆದರೂ ಒಂದು ಸಾಮಾನ್ಯ ಲಕ್ಷಣ ಹೇಳಬಹುದು. ಪರಿಣಾಮದಲ್ಲಿ ಸಮಾಧಾನ ನೀಡುವುದು ಕರ್ಮ; ಅಸಮಾಧಾನ ನೀಡುವುದು ಅಕರ್ಮ, ಸತ್ಯಶುದ್ಧವಾದುದು ಕರ್ಮ, ಹಾಗಿಲ್ಲದುದು ಅಕರ್ಮ. ಸ್ವ ಪರಹಿತ ಮಾಡುವುದು ಕರ್ಮ; ಮಾಡದಿರುವುದು ಅಕರ್ಮ.

ಕರ್ಮದ ಪರಿಣಾಮ ಎಷ್ಟು ಮಹತ್ವದ್ದೋ ಉದ್ದೇಶವೂ ಅಷ್ಟೇ ಮಹತ್ವದ್ದು. ಉದ್ದೇಶ ಒಳ್ಳೆಯದಿದ್ದು ಪರಿಣಾಮ ಕೆಟ್ಟದಾಗಿರುವ ಸಾಧ್ಯತೆಯಿದೆ; ಉದ್ದೇಶ ಕೆಟ್ಟದಾಗಿದ್ದು ಪರಿಣಾಮ ಒಳ್ಳೆಯದಾಗಿರುವ ಸಾಧ್ಯತೆಯೂ ಇದೆ. ಉದಾ: ಸಂಪಾದನೆ. ಧನ ಸಂಪಾದನೆಗಾಗಿ ದುಡಿಯುತ್ತೇವೆ ಪ್ರಾಮಾಣಿಕವಾಗಿ. ಆದರೆ ಆ ಸಂಪಾದನೆಯೇ ಪರಮಾರ್ಥವಾಗಿಬಿಟ್ಟರೆ ನಮ್ಮ ಸಂಪೂರ್ಣ ಬದುಕೇ ಹಾಳಾಗುತ್ತದೆ.

ಇನ್ನು ಭಿಕ್ಷುಕನ ತಲೆಗೆ ಗುರಿಯಿಟ್ಟು ಬೀಸಿದ ರೂಪಾಯಿ ನಾಣ್ಯವನ್ನು ಭಿಕ್ಷುಕ ಜಾಣ್ಮೆಯಿಂದ ಹಿಡಿದು ಕೊಳ್ಳುತ್ತಾನೆ. ಒಂದು ರೂಪಾಯಿ ಇತ್ತುದಕ್ಕೆ ಧನ್ಯವಾದ ಹೇಳಿ, ಸಂತೋಷದಿಂದ ಹೊರಟುಹೋಗುತ್ತಾನೆ. ಮೊದಲನೆಯ ದೃಷ್ಟಾಂತದಲ್ಲಿ ಉದ್ದೇಶ ಒಳ್ಳೆಯದು, ಪರಿಣಾಮ ಕೆಟ್ಟ. ಎರಡನೆಯ ದೃಷ್ಟಾಂತದಲ್ಲಿ ಉದ್ದೇಶ ಕೆಟ್ಟ, ಪರಿಣಾಮ ಒಳ್ಳೆಯದು!

ಕರ್ಮದ ಉದ್ದೇಶವೂ ಒಳ್ಳೆಯದಿರಬೇಕು; ಅಷ್ಟೇ ಅಲ್ಲ ಕರ್ಮ ಕೂಡ ಸತ್ಯವೂ ಶುದ್ಧವೂ ಆಗಿರಬೇಕು. ಹಾಗಿಲ್ಲದುದು 'ಅಕರ್ಮ' ಹಾಗಿದ್ದುದು 'ಕರ್ಮ'. ಅಕರ್ಮ ವರ್ಜ್ಯ; ಕರ್ಮ ಕರಣೀಯ. 'ಅಕರ್ಮ'ವನ್ನು ಜೀವನಾದ್ಯಂತ ಮಾಡಿದರೂ ಅದು ಕರ್ಮಯೋಗ ವೆನಿಸದು.

**ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ,**
**ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ!**
**ಮಾಡುವ ನೀಡುವ ನಿಜಗುಣವುಳ್ಳರೆ**
**ಕೂಡಿಕೊಂಬ ನಮ್ಮ ಕೂಡಲಸಂಗಮದೇವಾ.**

ನಾವು ಹಗಲು ರಾತ್ರಿ ಜೀವನಾದ್ಯಂತ ದುಡಿಯುತ್ತೇವೆ. ಆದರೂ ಬಾಳ ಬಂಧನ ತಪ್ಪಿಲ್ಲ. ನೀಡುತ್ತೇವೆ, ಆದರೆ ನೀಡಿದ ಧರ್ಮ ನಮ್ಮನ್ನು ಪ್ರಾಪಂಚಿಕ ಮೋಹಬಂಧನದಿಂದ ಮೇಲೆತ್ತಿಲ್ಲ. ಏಕೆ? ನಮ್ಮದು ಕರ್ಮ ಜೀವನ; ಕರ್ಮಯೋಗ ಜೀವನವಲ್ಲ. 'ಮಾಡುವ ನೀಡುವ ನಿಜಗುಣ' ನಮ್ಮಲ್ಲಿಲ್ಲ. ಬಸವಣ್ಣನವರು, ಸಿದ್ಧರಾಮಣ್ಣನವರು ಸತ್ಯ-ಶುದ್ಧ ಕಾಯಕ ನಿಷ್ಠರು. ಲೋಕದ ಹಿತಕ್ಕಾಗಿ, ಧರ್ಮ ಸಾಧನೆಗಾಗಿ ಸಾವಿರಾರು ಕರ್ಮಗಳನ್ನಾಚರಿಸಿದರು; ಎಲ್ಲ ರೀತಿಯಿಂದ. ಬಾವಿ ಕೆರೆ ಕಟ್ಟಿಸಿದರು; ಮಹಾದಾಸೋಹ ನಡೆಸಿದರು; ಧಾರ್ಮಿಕ ಸಾಮಾಜಿಕ ಪ್ರಜ್ಞೆಯನ್ನು ಜಾಗ್ರತಗೊಳಿಸಿದರು; ತಾತ್ವಿಕ ದೃಷ್ಟಿಯನ್ನಿತ್ತರು. ಅನುಭಾವ ಗೋಷ್ಠಿಗಳ ನಡೆಸಿದರು; ನಾಡಿನಲ್ಲಿ ಆತ್ಮಜ್ಞಾನದ ದೀವಟಿಗೆ ಉರಿಸಿದರು ಸತತವಾಗಿ. ಆದರೆ ಒಂದು ಅಚ್ಚರಿಯೆಂದರೆ ಆ ಕರ್ಮಗಳಲ್ಲಿ ಅವರು ಕ್ಷಣಮಾತ್ರವೂ ಬಂಧಿತರಾಗಲಿಲ್ಲ. ನಿರ್ಲಿಪ್ತ ಮನೋಭಾವ ಫಲಾಕಾಂಕ್ಷಾ ರಾಹಿತ್ಯ; ದೇವನಲ್ಲಿ ಸಮರ್ಪಿತ ಮನೋಭಾವ; ಇವೆಲ್ಲ ಅವರಲ್ಲಿ ವಿಕಸಿತ.

ಶಂಕರರು ನಾಡಿನ ನಾಲ್ಕೂ ನಿಟ್ಟಿನಲ್ಲಿ ಚರಿಸಿದರು; ಕಷ್ಟಗಳ ಸಹಿಸಿದರು; ಅದ್ವೈತ ಜ್ಞಾನವನ್ನು ಹರಡಿದರು. ಜ್ಞಾನೇಶ್ವರರು ಬಾಲವಯಸ್ಸಿನಲ್ಲಿಯೇ 'ಜ್ಞಾನೇಶ್ವರಿ' ಎಂಬ ಅಮರ ಕಾವ್ಯ ರಚಿಸಿದರು. ಸಾವಿರಾರು ಜನರ ಬದುಕಿನಲ್ಲಿ ಆಧ್ಯಾತ್ಮದ ರಸವ ಸುರಿಸಿದರು. ಅವರ ಕರ್ಮಗಳು ಅಬಾಧಕ ವಿಮೋಚಕ; ತಾರಕ. ಅವರದು ಕರ್ಮಯೋಗ ಜೀವನ!

ನಾವೂ ದುಡಿಯುತ್ತೇವೆ ಸಾಕಷ್ಟು, ಆದರೆ ಅದೆಲ್ಲಾ ಸಾಂಸಾರಿಕ ವಿಷಯಗಳಿಗಾಗಿ, ಧನ ಕನಕಗಳಿಗಾಗಿ. ಆದ್ದರಿಂದ ಆ ದುಡಿಮೆಯೇ ನಮಗೆ ಬಂಧನ ಗೊಳಿಸುತ್ತಲಿದೆ. ದುಡಿಯಬೇಕು; ದುಡಿಮೆಯ ತ್ಯಜಿಸಲಾಗದು. ಆದರೆ ಆ ದುಡಿಮೆಯ ಜ್ಞಾನಕ್ಕಾಗಿ ಹಾಗೂ ಜಗತ್ತಿನಲ್ಲಿ, ಜೀವನದಲ್ಲಿ 'ಸತ್ಯಂ ಶಿವಂ ಸುಂದರಂ' ಅಭಿವ್ಯಕ್ತಿಗಾಗಿ. ಮಾಡುವ ನೀಡುವ ನಿಜಗುಣವುಳ್ಳರೆ ಪರಮಾತ್ಮನ ಅನುಗ್ರಹ ಸಮನಿಸುತ್ತದೆ.

ದುಡಿಮೆಯಿಂದ ಪ್ರಸನ್ನತಾ-ಪ್ರಸಾದ ಉಂಟಾದರೆ ಅದೇ ಕರ್ಮಯೋಗ. ದುಃಖ-ಬಂಧನ ಉಂಟಾದರೆ ಆ ದುಡಿಮೆಯೇ 'ಅಕರ್ಮ', ಸಲ್ಲದ ಕರ್ಮ; ಬಾಧಕ ಕರ್ಮ. ಮನುಷ್ಯ ಪ್ರಾಮಾಣಿಕವಾಗಿ, ಸದ್ಭಾವದಿಂದ ದುಡಿಯಬೇಕು; ಅದು ಕಾಯಕ. ಕಾಯಕದ ಪ್ರತಿಫಲವನ್ನು ದೇವನಿಗೆ, ದೇವನಂತ ವ್ಯಕ್ತಿಗಳಿಗೆ ಹಾಗೂ ಜೀವಜಂತುಗಳಿಗೆ ಅರ್ಪಿಸಬೇಕು. ಅದು ಅರ್ಪಣ. ಬಳಿಕ ಹಾಗೆ ದೇವಾರ್ಪಿತವಾದುದನ್ನು ತಾನು ಸ್ವೀಕರಿಸಬೇಕು; ಅದು ಪ್ರಸಾದ. ನಮ್ಮ ಕರ್ಮದ ಕೇಂದ್ರ ಬಿಂದು ದೇವನಾಗಬೇಕು. ಅವನ ನೆನಹಿನೊಂದಿಗೆ ದುಡಿಮೆ; ಅವನಿಗಾಗಿ ಅರ್ಪಣೆ; ಅವನದೆಂದೇ ಸ್ವೀಕಾರ! ಇಂಥ ಪ್ರಸಾದ ನಮ್ಮ ಬಾಹ್ಯಾಂತರಂಗವನ್ನೆಲ್ಲ ಹಸನಾಗಿಸುತ್ತದೆ! ಪ್ರಸನ್ನತೆಯದರಿಂದ ಅಳವಡುತ್ತದೆ! ಅದು ದೇವಕೃಪೆ. ಅದು ಭಗವತ್ಸಿದ್ಧಿ! ಸತ್ಯಾನುಭವದ ಬದುಕು.



ಈ ಪ್ರಸಾದೀಕರಣದ ಸಾಧನೆಯ ಕ್ರಮ ಹೀಗಿದೆ; ಇದೊಂದು ಹೂ. ಇದರಲ್ಲಿ ರೂಪಿದೆ; ಸೌಂದರ್ಯವಿದೆ. ನಮ್ಮ ಇಷ್ಟಲಿಂಗಕ್ಕೆ, ಇಷ್ಟದೇವತೆಗೆ ಈ ಹೂವನ್ನು ಅರ್ಪಿಸುತ್ತೇವೆ. ರೂಪವನ್ನು ನಿವೇದಿಸುತ್ತೇವೆ. ಈಗ ಈ ರೂಪು ದೇವನದು. ಹೂ ದೇವನದು. ನಮ್ಮದಲ್ಲ. ಈ ಭಾವದಿಂದಲೇ ಅದೇ ಹೂವಿನ ಸೌಂದರ್ಯವನ್ನು ನೋಡುತ್ತೇವೆ; ಕಣ್ಣ ತುಂಬಿಕೊಳ್ಳುತ್ತೇವೆ ಆ ಸೊಬಗಿನಿಂದ. ಅದನ್ನು ಅನುಭವಿಸುತ್ತೇವೆ. ಆನಂದಿಸುತ್ತೇವೆ. ಅದು ಪ್ರಸಾದ! ಅದು ಪ್ರಸನ್ನತೆ!

ವಿಷಯವು ರೂಪು. ಆ ರೂಪು ಲಿಂಗಾರ್ಪಿತವಾದ ಬಳಿಕ ನಾನು ಸ್ವೀಕರಿಸುತ್ತೇನೆ; ಆಸ್ವಾದಿಸುತ್ತೇನೆ. ಅದು ರುಚಿ. ನಂತರ ಪವಿತ್ರವಾದ ಆನಂದ ಉಂಟಾಗುತ್ತೆ. ಅದರ ಅನುಭವವದು 'ಅನುಭಾವ' ಪ್ರಸಾದ. ತೃಪ್ತಿ ಪ್ರಸಾದ! ಅರ್ಪಿತ ಹಾಲು ರೂಪ ಪ್ರಸಾದ. ಸ್ವೀಕೃತ ಹಾಲು ರುಚಿ ಪ್ರಸಾದ. ಉಂಟಾಗುವ ತುಷ್ಟಿ ತೃಪ್ತಿ ಪ್ರಸಾದ! ರೂಪ ಪ್ರಸಾದವು ಶುದ್ಧ ಪ್ರಸಾದ; ರುಚಿ ಪ್ರಸಾದವು ಸಿದ್ಧ ಪ್ರಸಾದ; ತೃಪ್ತಿ ಪ್ರಸಾದವೇ ಪ್ರಸಿದ್ಧ ಪ್ರಸಾದ. ಅದೇ ರೀತಿ, ನಾವು ಗೈದ ಎಲ್ಲ ಕರ್ಮ ಮತ್ತು ಕರ್ಮಫಲಗಳನ್ನು ದೇವನಿಗೆ ಅರ್ಪಿಸುವುದು ಶುದ್ಧ ಪ್ರಸಾದ; ಆ ಅರ್ಪಿತ ಫಲಗಳನ್ನು ದೇವನ ಕರುಣೆ ಎಂಬ ಭಾವದಿಂದ ಅನುಭವಿಸುವುದು ಸಿದ್ಧ ಪ್ರಸಾದ; ಅದರಿಂದ ಉಂಟಾದ ತೃಪ್ತಿಯನ್ನು ಭಗವತ್ಕೃಪೆ ಎಂದು ಅನುಭವಿಸುವುದು ಪ್ರಸಿದ್ಧ ಪ್ರಸಾದ! 'ರೂಪ' ಪ್ರಸಾದದಿಂದ ದೇಹೇಂದ್ರಿಯಗಳ ಶುದ್ಧಿ. ರುಚಿ ಪ್ರಸಾದದಿಂದ ಭಾವ ಸಿದ್ಧಿ. ತೃಪ್ತಿ ಪ್ರಸಾದದಿಂದ ಅನುಭಾವ!

ಶುದ್ಧ ಪ್ರಸಾದದಿಂದ ದೇಹೇಂದ್ರಿಯ ಪ್ರಸನ್ನತೆ. ಸಿದ್ಧ ಪ್ರಸಾದದಿಂದ ಮನಸ್ಸಿನ ಪ್ರಸನ್ನತೆ. ಪ್ರಸಿದ್ಧ ಪ್ರಸಾದದಿಂದ ಭಾವ ಪ್ರಸನ್ನತೆ. ದೇಹದ ದುಡಿಮೆಯಿಂದ ದೇಹಕ್ಕೆ ಪ್ರಸನ್ನತೆ. ಮನಸ್ಸಿನ ದುಡಿಮೆಯಿಂದ ಮನಸ್ಸಿಗೆ ಪ್ರಸನ್ನತೆ. ಬುದ್ಧಿಯ ದುಡಿಮೆಯಿಂದ ಮತಿಗೆ ಪ್ರಸನ್ನತೆ. ಇದು ಸರ್ವಾಂಗ ಪ್ರಸನ್ನತೆ. ಇನ್ನು ಈ ಸರ್ವಾಂಗಪ್ರಸನ್ನನಾದ ಜೀವ(ಅಂಗ)ನು ತನ್ನನ್ನೇ ದೇವನಲ್ಲಿ ಸಮರ್ಪಿಸಿಕೊಂಡು ಸಮಾಲೀನವಾದರೆ ಆತ ಸ್ವತಃ ಪ್ರಸಾದಗೊಳ್ಳುತ್ತಾನೆ. ದೇವಾಭಿನ್ನ ಅನುಭೂತಿಯದು! ಅದೇ ಅನುಭಾವ! ಅದು 'ಏಕಪ್ರಸಾದ'. ನಾನು ಪ್ರಸಾದ, ಸ್ವೀಕರಿಸುವವ ಎಂಬ ಭಾವ ಇಲ್ಲ. ಪ್ರಸಾದವೂ ಇಲ್ಲ. ಪ್ರಸಾದಕ್ಕೆ ಕಾರಣವಾದ ಅರ್ಪಣವೂ ಇಲ್ಲ. ಪ್ರಸಾದ ಸ್ವೀಕರಿಸುವ ಕ್ರಿಯೆಯು ಇಲ್ಲ. ಎಲ್ಲಾ ನಿಂತು ಹೋಗಿ ಬರಿ ಪ್ರಸಾದ ಸ್ವೀಕರಿಸುವ ಕ್ರಿಯೆಯು ಇಲ್ಲ. ಎಲ್ಲಾ ನಿಂತುಹೋಗಿ ಬರಿ ಪ್ರಸಾದ ಉಳಿದರದು ಏಕ ಪ್ರಸಾದ! ಈ ಸ್ಥಿತಿಗೆ ತಲುಪಿಸುವ ಕ್ರಿಯೆಗೆ ಕರ್ಮ ಯೋಗ, ಕಾಯಕಯೋಗ ಎಂಬ ನಾಮ!

ನಾವು ಯಾವುದಾದರೂ ಕ್ಷೇತ್ರದಲ್ಲಿ ಇರಲಿ, ಅಲ್ಲಿ ಮನಮುಟ್ಟಿ ದುಡಿಯುವುದು. ಕಳವು ಹಿಂಸೆ ಹುಸಿ ಆತ್ಮ ಬಣ್ಣನೆ ನಿಂದೆ ದ್ವೇಷ ಮೋಹಾದಿಗಳಿಲ್ಲದ ಬಾಹ್ಯಾಂತರ ಶುದ್ಧ ಭಾವದಿಂದ ಶ್ರಮಿಸುವುದು. ಬಂದ ಕರ್ಮಫಲವ ದೇವಭಾವದಿಂದ ಅರ್ಪಿಸಿ ಅನುಭವಿಸುವುದು. ಇದರಿಂದ ಬದುಕೆಲ್ಲ ಪ್ರಸಾದಮಯವಾಗುತ್ತದೆ. ಒಟ್ಟಿನಲ್ಲಿ, ದುಡಿಮೆ ಅತ್ಯಂತ ಮಹತ್ವದ್ದು. ಮನುಷ್ಯ ನೂರು ವರುಷ ಬದುಕಿದರೂ ಸರಿ, ದುಡಿಮೆ ನಿಲ್ಲಬಾರದು; ಒಂದಿಲ್ಲ ಒಂದು ಕಾಯಕ ಮಾಡಬೇಕು. ಅದೂ ಅತ್ಯಂತ ಪ್ರೇಮದಿಂದ; ದೇವ ಶ್ರದ್ಧೆಯಿಂದ.

ನಾವು ಬಯಸಿದರೂ ಸರಿ, ಬಯಸದಿದ್ದರೂ ಸರಿ, ದುಡಿಮೆಗೆ ಪ್ರತಿಫಲ ಬಂದೇ ಬರುತ್ತದೆ. ಅದನ್ನು ಭಗವದ್ವಸ್ತುವೆಂದು ಭಾವಿಸಬೇಕು. ಅದರ ಒಂದಂಶ ದೇವಾನುಗ್ರಹವೆಂದು ಸ್ವೀಕರಿಸಬೇಕು. ಅದು ಪ್ರಸಾದ, ಶಬ್ದ ಸ್ಪರ್ಶ ರೂಪ ರಸ ಗಂಧ ಸುಖ ದುಃಖ ಇವೆಲ್ಲವೂ ಅರ್ಪಿತ ಪ್ರಸಾದವಾಗಬೇಕು! ಅರ್ಪಣೆಗಾಗಿಯೇ ಕರ್ಮ ಮತ್ತು ಕರ್ಮಫಲ! ಪ್ರಸಾದಭಾವವೇ ಜೀವನ! ಹೀಗಾದರೆ ನಮ್ಮ ಬದುಕು ಸಾರ್ಥಕ, ದಿವ್ಯ, ಪವಿತ್ರ!

(ಕೃಪೆ: ಭಗವಚ್ಚಿಂತನ)





ಅಭಿನಂದನೆ

# ಅಖಿಲ ಭಾರತ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಡಾ. ಚಂದ್ರಶೇಖರ ಕಂಬಾರ ಆಯ್ಕೆ



ಧಾರವಾಡದಲ್ಲಿ ನಡೆಯುವ ೮೪ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಜ್ಞಾನಪೀಠ ಪುರಸ್ಕೃತ ಡಾ. ಚಂದ್ರಶೇಖರ ಕಂಬಾರರು ಸರ್ವಾನುಮತದಿಂದ ಆಯ್ಕೆಯಾಗಿರುವುದಕ್ಕೆ ಸಿದ್ಧಗಂಗಾ ಹೃತ್ಪೂರ್ವಕವಾಗಿ ಅಭಿನಂದಿಸುತ್ತಿದೆ.

ಕವಿ, ಕಥೆಗಾರ, ನಾಟಕಕಾರ, ಕಾದಂಬರಿಕಾರ, ಜಾನಪದ ತಜ್ಞ, ಚಲನಚಿತ್ರ ನಿರ್ದೇಶಕ, ಸಂಗೀತ ನಿರ್ದೇಶಕರು, ಹಾಡುಗಾರ, ಹೀಗೆ ಬಹುಮುಖ ಪ್ರತಿಭೆಯ ಡಾ. ಕಂಬಾರರು ಆಡಳಿತಗಾರರೂ, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ವಿಧಾನಪರಿಷತ್ತಿನ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ಪ್ರಸ್ತುತ ಕೇಂದ್ರ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿರುವ ಡಾ. ಚಂದ್ರಶೇಖರ ಕಂಬಾರ ಅವರು ಜನಿಸಿದ್ದು ಜನವರಿ ೨, ೧೯೩೭ ರಂದು. ಹುಟ್ಟಿದ್ದು ಊರು ಬೆಳಗಾವಿ ಜಿಲ್ಲೆ ಘೋಡಗೇರಿಯಲ್ಲಿ, ತಂದೆ ಬಸವಣ್ಣಪ್ಪ ತಾಯಿ ಚನ್ನಮ್ಮ, ಗೋಕಾಕದಲ್ಲಿ ಪ್ರೌಢಶಿಕ್ಷಣ, ಬೆಳಗಾವಿಯಲ್ಲಿ ಬಿ.ಎ., ಕರ್ನಾಟಕ ವಿಶ್ವವಿದ್ಯಾಲಯದಿಂದ ಕನ್ನಡ ಸ್ನಾತಕೋತ್ತರ ಪದವಿ ಹಾಗೂ ಪಿ.ಹೆಚ್.ಡಿ. ಪದವಿಯನ್ನು ಪಡೆದಿದ್ದಾರೆ. ಜಾನಪದ ಅಕಾಡೆಮಿ ಅಧ್ಯಕ್ಷರಾಗಿ, ರಾಷ್ಟ್ರೀಯ ಶಾಲೆಯ ನಿರ್ದೇಶಕರಾಗಿ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಕುಲಪತಿಯಾಗಿ, ಚಿಕಾಗೊ ವಿಶ್ವವಿದ್ಯಾಲಯದ ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ.

**ಸಾಹಿತ್ಯ ಕ್ಷೇತ್ರ** : ಡಾ. ಕಂಬಾರ ಅವರು ಇದುವರೆಗೆ ೧೦ ಕವನ ಸಂಕಲನಗಳು, ೨೫ ನಾಟಕಗಳು, ಒಂದು ಮಹಾಕಾವ್ಯ, ೬ ಕಾದಂಬರಿ ಅಲ್ಲದೆ ೧೭ ಗದ್ಯ ಸಂಪಾದನೆಗಳು, ಸಂಗ್ರಹಗಳು, ಪ್ರಬಂಧ ಸಂಕಲನಗಳು, ಸಂಶೋಧನಾ ಪುಸ್ತಕಗಳನ್ನು ಲೋಕಾರ್ಪಣೆ ಮಾಡಿದ್ದಾರೆ. 'ಸಿರಿಸಂಪಿಗೆ' ಅವರ ಶಿಷ್ಯರು, ಅಭಿಮಾನಿಗಳು ಅರ್ಪಿಸಿದ ಅಭಿನಂದನಾ ಗ್ರಂಥ.

**ಚಲನಚಿತ್ರ ಕ್ಷೇತ್ರ** : ಚಲನಚಿತ್ರ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿರುವ ಡಾ. ಕಂಬಾರರು ತಮ್ಮ ಕಾದಂಬರಿಗಳಾದ ಕರಿತಾಯಿ, ಸಂಗೀತಾ, ಕಾಡುಕುದುರೆ, ಸಿಂಗಾರವ್ವ ಮತ್ತು ಅರಮನೆಯನ್ನು ಚಲನಚಿತ್ರವಾಗಿಸಿದವರೂ. ತಾವೇ ಕಥೆ, ಸಂಗೀತ, ನಿರ್ದೇಶನ ನೀಡಿದ್ದಾರೆ. ಇವರ ಸಂಗೀತ ನಿರ್ದೇಶನ 'ಕಾಡುಕುದುರೆ ಓಡಿ ಬಂದಿತ್ತಾ' ಹಾಡಿಗಾಗಿ ಶ್ರೀ ಶಿವಮೊಗ್ಗ ಸುಬ್ಬಣ್ಣ ಅವರಿಗೆ ರಾಷ್ಟ್ರಪತಿಗಳ ಫಲಕ ಸಿಕ್ಕಿದೆ.

**ಪ್ರಶಸ್ತಿಗಳು** : ಡಾ. ಕಂಬಾರರು ಸಾಹಿತ್ಯ, ಚಲನಚಿತ್ರ, ನಾಟಕ ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ಹಲವಾರು ಪ್ರತಿಷ್ಠಾನ ಪ್ರಶಸ್ತಿಗಳು ಸಂದಿವೆ. ಅವುಗಳಲ್ಲಿ ಜ್ಞಾನಪೀಠ ಪ್ರಶಸ್ತಿ ಪುರಸ್ಕಾರ, ಪದ್ಮಶ್ರೀ, ಕಾಳಿದಾಸ ಸಮ್ಮಾನ್, ಟಾಗ್ಯೂರ್ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ, ರಾಜ್ಯ ನಾಟಕ ಅಕಾಡೆಮಿ, ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಕೇರಳದ ಆಶಾನ ಪ್ರಶಸ್ತಿ, ಕಮಲಾದೇವಿ ಚಟ್ಟೋಪಧ್ಯಾಯ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕಬೀರ ಸಮ್ಮಾನ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರಶಸ್ತಿಗಳಿಗೆ ಭಾಜನರಗಿದ್ದಾರೆ.

ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡಿರುವ ಕಂಬಾರರು, ಶ್ರೀಮಠದಲ್ಲಿ ನಡೆದ ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣವಾದ ಉಪನ್ಯಾಸ ನೀಡಿದ್ದಾರೆ. ಪರಮಪೂಜ್ಯ ಶ್ರೀಗಳವರ ಶತಮಾನೋತ್ಸವ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಆಯ್ಕೆಯಾಗಿರುವ ಈ ಶುಭ ಸಂದರ್ಭದಲ್ಲಿ 'ಸಿದ್ಧಗಂಗಾ' ತುಂಬು ಹೃದಯದಿಂದ ಅಭಿನಂದನೆಗಳನ್ನು ಸಲ್ಲಿಸುತ್ತದೆ.





ನಾಡು-ನುಡಿ

# ಕನ್ನಡಕ್ಕೆ ಆಗಬೇಕಾದ್ದೇನು !

- ದೇ. ಜವರೇಗೌಡ *

ಕರ್ನಾಟಕದ ನೆಲ, ಜಲ, ಭಾಷೆ ಸಂಸ್ಕೃತಿಗಳು, ಅರ್ಥಾತ್ ಕರ್ನಾಟಕದ ಹಿತ ಇನ್ನೂ ಅಪಾಯದಿಂದ ಪಾರಾಗಿಲ್ಲ. ಭಾಷೆಯ ರಕ್ಷಣೆಯಿಂದ ಮಾತ್ರ ನಾಡಿನ ರಕ್ಷಣೆ ಹಾಗೂ ಸಂಸ್ಕೃತಿ ರಕ್ಷಣೆ ಸಾಧ್ಯ. ಜಾಗತೀಕರಣ, ದೆಹಲೀಕರಣದ ಅಪಾಯಗಳಿಗೂ ಕನ್ನಡ ಭದ್ರಕೋಟೆ ಯಾಗಿ ನಿಲ್ಲಬೇಕಾಗಿದೆ. ಕನ್ನಡಕ್ಕಾಗಿರುವ ಉದ್ಧಾರಕ್ಕಿಂತ ಆಗಬೇಕಾಗಿರುವ ಉದ್ಧಾರ ಅಪಾರವಾಗಿದೆ.

ಚಳುವಳಿಕಾರರಿಂದ, ಹೋರಾಟಗಾರರಿಂದ, ಭಾಷಾ ಭಿಮಾನಿಗಳಿಂದ ಕನ್ನಡಕ್ಕೆ ತುಂಬ ಒಳಿತಾಗಿದೆ ನಿಜ, ಆದರೂ, ಅಪಾಯದ ಸಂದರ್ಭದಲ್ಲಿ ಎಲ್ಲರೂ ಒಂದಾಗಿ ಏಕಮುಖ ಸಾಮೂಹಿಕ ಪ್ರತಿಭಟನೆಯನ್ನು ಸಲ್ಲಿಸುವ ಪ್ರಯತ್ನ ನಡೆದಿಲ್ಲ. ಚಳುವಳಿಯ ಹಿನ್ನಲೆಯಲ್ಲೊಂದು ಸಿದ್ಧಾಂತವಿರಬೇಕು; ಸರಿಯಾದ ಮಾರ್ಗದ ಮೂಲಕ ಗುರಿಯನ್ನು ಮುಟ್ಟುವಂತಾಗಬೇಕು. ಎಲ್ಲ ಶ್ರೀಮಂತಿಕೆಗಿಂತ ಜ್ಞಾನೈಶ್ವರ್ಯ ಅಮೂಲ್ಯವಾದದ್ದು; ಭಾಷಾ ಮಾಧ್ಯಮದ ಮೂಲಕ ಅದು ಲಭ್ಯ. ಗ್ರಹಣ-ಅಭಿವ್ಯಕ್ತಿ ಮತ್ತು ಸ್ಮರಣ ಶಕ್ತಿಗಳು ಭಾಷೆಯ ಮೂಲಕ ಮನುಷ್ಯನಿಗೆ ವಶವಾಗುತ್ತವೆ. ಆದರೆ ಈ ಶಕ್ತಿಗಳು ಪ್ರಾದೇಶಿಕ ಅಥವಾ ಮಾತೃಭಾಷೆಯಿಂದ ಸಿದ್ಧಿಸುವಂತೆ ಬೇರೆ ಭಾಷೆಗಳಿಂದ ಸಿದ್ಧಿಸುವುದಿಲ್ಲ. ಆದ್ದರಿಂದ ಪ್ರಜಾಪ್ರಭುತ್ವದ ಯಶಸ್ಸಿಗೆ ಪ್ರಾದೇಶಿಕ ಭಾಷೆ ಕಾರಣವಾಗುತ್ತದೆ. ಅಷ್ಟೇ ಅಲ್ಲ 'ಸರ್ವರಿಗೆ ಸಮಪಾಲು' 'ಸರ್ವರಿಗೆ ಸಮಪಾಲು' 'ಸರ್ವರಿಗೆ ಸಮಬಾಳು' ಮತ್ತು 'ಸರ್ವಸಮಾನತೆ', ಈ ಸಿದ್ಧಾಂತಗಳ ಯಶಸ್ಸಿಗೂ ಪ್ರಾದೇಶಿಕ ಭಾಷೆಗೂ ಹೊಕ್ಕುಳ ಬಳ್ಳಿ ಸಂಬಂಧವಿದೆಯೆಂಬುದನ್ನು ಮರೆಯಲಾಗದು.

ಆಂಗ್ಲ ಮಾಧ್ಯಮ ಶಾಲೆಗಳು ಭಾರತೀಯ, ಕರ್ನಾಟಕ ಸಂಸ್ಕೃತಿಯ ಮೇಲೆ ದುಷ್ಪರಿಣಾಮ ಬೀರುತ್ತಿವೆಯಲ್ಲದೆ, ಜನಮನಸ್ಸಿನ ಹಾಗೂ ಸಮಾಜದ ಶಾಂತಿಯನ್ನು ಕಲಕುತ್ತಿವೆ. ಅವು ಭ್ರಷ್ಟಾಚಾರದ ಕೂಪಗಳೂ ಆಗಿವೆ, ಅಷ್ಟೇ ಅಲ್ಲ, ಅವು ಸಮಾಜದಲ್ಲಿ ಶ್ರೇಷ್ಠ, ಕನಿಷ್ಠ ವರ್ಗಗಳನ್ನು ಸೃಷ್ಟಿಸುತ್ತಿವೆ.

ಆದ್ದರಿಂದ ಆಂಗ್ಲಮಾಧ್ಯಮ ಶಾಲೆಗಳನ್ನು ಸಂಪೂರ್ಣವಾಗಿ ನಿಷೇದಿಸಬೇಕು, ಇಲ್ಲವೇ ಅವುಗಳಿಗೆ ಮುಕ್ತಾವಕಾಶ ನೀಡಬೇಕು. ಮುಕ್ತಾವಕಾಶ ನೀಡುವುದಾದರೆ, ಅವುಗಳಿಂದ ಭಾರಿ ಶುಲ್ಕವನ್ನು ವಸೂಲಿ ಮಾಡಿ, ಕನ್ನಡ ಮಾಧ್ಯಮ ಶಾಲೆಗಳನ್ನು ಉತ್ತಮಗೊಳಿಸಬೇಕು. ಆದರೆ ಸರ್ಕಾರದ ಎಲ್ಲ ನೌಕರಿಗಳು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಮಾತ್ರವೇ ಸಲ್ಲಬೇಕು; ಮತ್ತು ಎಲ್ಲ ವಾಣಿಜ್ಯ ಮತ್ತು ಕೈಗಾರಿಕಾ ಸಂಸ್ಥೆಗಳಲ್ಲಿ ಸರೋಜಿನಿ ಮಹಿಷಿ ವರದಿಯನ್ನು ಕಡ್ಡಾಯವಾಗಿ ಜಾರಿಗೊಳಿಸಬೇಕು. ಆಂಗ್ಲಮಾಧ್ಯಮದ ಶಾಲೆಗಳಲ್ಲಿ ವಂತಿಗೆಯ ಮೇಲೆ ನಿಯಂತ್ರಣವಿರಬೇಕು. ವಂತಿಗೆಯ ಆಧಾರದ ಮೇಲೆ ಶುಲ್ಕವನ್ನು ನಿಗದಿಸುವುದರ ಜತೆಗೆ, ಲೆಕ್ಕಪತ್ರಗಳ ತನಿಖೆಯ ಅಧಿಕಾರ ಸರ್ಕಾರಕ್ಕಿರಬೇಕು.

ಕೆಎಎಸ್ ಮತ್ತಿತರ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಆಂಗ್ಲ ಭಾಷಾ ಪತ್ರಿಕೆ ಕಡ್ಡಾಯವಾಗಬಾರದು. ಆದರೆ ನೌಕರಿಗೆ ಸೇರಿದ ಎರಡು ವರ್ಷದೊಳಗಾಗಿ ಉತ್ತಮ ಮಟ್ಟದ ಇಂಗ್ಲೀಷ್ ಅನ್ನು ಕಡ್ಡಾಯವಾಗಿ ಕಲಿಯಲೇಬೇಕು. ಕಲಿಯದಿದ್ದರೆ ಅವರನ್ನು ಮನೆಗೆ ಕಳಿಸಬೇಕು. ಐಎಎಸ್ ಅಧಿಕಾರಿಗಳು ನೌಕರಿಗೆ ಸೇರಿದ ನಂತರ ತಾನೆ ಕನ್ನಡ ಕಲಿಯುವುದು.

ಇಂಜಿನಿಯರಿಂಗ್, ವೈದ್ಯ ಶಿಕ್ಷಣ ಆಂಗ್ಲಭಾಷೆಯಲ್ಲಿ ನಡೆಯುವುದರಿಂದ ಆಂಗ್ಲಭಾಷಾ ದಾಹದಿನದಿಂದ ದಿನಕ್ಕೆ ವಿದ್ಯಾರ್ಥಿ ಹಾಗೂ ಪೋಷಕ ವೃಂದದಲ್ಲಿ ಹೆಚ್ಚುತ್ತಿದೆ. ಇಂಜಿನಿಯರಿಂಗ್, ವೈದ್ಯ ಶಿಕ್ಷಣ ಸಹ ದ್ವಿಭಾಷಾ ಮಾಧ್ಯಮ (ಇಂಗ್ಲೀಷ್ ಮತ್ತು ಕನ್ನಡ) ದಲ್ಲಿ ನಡೆಯುವುದಾದರೆ ಇಂಗ್ಲೀಷ್ ದಾಹ ಕಡಿಮೆಯಾಗುತ್ತದೆ. ವಿಜ್ಞಾನ ಬೋಧನೆ ಎರಡು ಭಾಷೆಗಳಲ್ಲಿಯೂ ನಡೆಯಬಹುದು; ಅಂದರೆ ಅಗತ್ಯನುಗುಣವಾಗಿ ಎರಡನ್ನೂ ಬೆರೆಸುವುದು ಸಹಜ ತಾನೆ! ಇದೇ ವಿಧಾನ ಎರಡು ಭಾಷೆಗಳಲ್ಲಿಯೂ ನಡೆಯಬಹುದು; ಅಂದರೆ ಅಗತ್ಯಕ್ಕನುಗುಣವಾಗಿ ಎರಡನ್ನೂ ಬೆರೆಸುವುದು ಸಹಜ ತಾನೆ! ಇದೇ ವಿಧಾನ ವಿಷಯ ಬೋಧನೆಯಲ್ಲಿಯೂ ಚಾಲ್ತಿಯಲ್ಲಿರಬಾರದೇಕೆ?

---

* ವಿಶ್ರಾಂತ ಕುಲಪತಿಗಳು, ಮೈಸೂರು

ಸಾವಿರಾರು ವರ್ಷಗಳಿಂದ ಹೊರಗಿನ ಜನ ಕರ್ನಾಟಕಕ್ಕೆ ವಲಸೆ ಬರುವುದುಂಟಷ್ಟೆ. ಇದು ಅವರಿಗೊಂದು ಮೇಹುಗಾಡಾಗಿದೆ. ಇಲ್ಲಿಯ ನೆಲ, ಜಲ, ಹವ, ಅವರಿಗೆ ಬೇಕಾಗಿದೆ. ಇಲ್ಲಿಯ ಸಮಾಜದಲ್ಲಿ ಅವರು ಒಂದಾಗಲಿಷ್ಟವಿಲ್ಲ. ನೆಲ, ಜಲಗಳ ಪ್ರಶ್ನೆ ಬಂದಾಗ ಈ ಜನ ತಾವು ಬಂದ ಪ್ರದೇಶಗಳ ಸರ್ಕಾರದ ಕಡೆಗೆ ವಾಲುತ್ತಾರೆ; ಇಲ್ಲಿಯ ಮೂಲನಿವಾಸಿಗಳ ಬೆನ್ನಿಗೆ ಚೂರಿ ಹಾಕುತ್ತಾರೆ. ಮಾಸ್ತಿ, ಬೇಂದ್ರೆ, ರಾಜರತ್ನಂ, ಗುಂಡಪ್ಪ ಮೊದಲಾದ ಸುಸಂಸ್ಕೃತ ಸಜ್ಜನರಂತೆ ಹಾಲು ಸಕ್ಕರೆ ಬೆರೆಯುವಂತೆ ಬೆರೆಯಬಾರದೇಕೆ? ಅಂತೆಯೇ ಬಹು ರಾಷ್ಟ್ರೀಯ ಕಂಪೆನಿ ಮತ್ತು ಕಾರ್ಖಾನೆಗಳ ಜನ ಇಲ್ಲಿಯ ಭಾಷೆಯನ್ನು ಕಲಿತುಕೊಂಡು ಇಲ್ಲಿಯ ಸಂಸ್ಕೃತಿಯೊಡನೆ ಹೊಂದಿಕೊಂಡು, ಏಕಮಾತ್ರ ಜನಾಂಗದಂತೇಕೆ ಬಾಳುವೆ ನಡೆಸಬಾರದು? ಹೊರಗಿನ ಜನ, ನೆಲ-ಜಲಗಳನ್ನು ಕಬಳಿಸುವುದು ಮಾತ್ರವಲ್ಲ, ರಾಜಕೀಯವನ್ನು ಸಹ ಬುಡಮೇಲು ಮಾಡುತ್ತಾರೆ. ವಿಶೇಷವಾಗಿ ಚುನಾವಣೆಗಳ ಸಮಯದಲ್ಲಿ ತಂತಮ್ಮ ರಾಜ್ಯಗಳ ಶಿಸ್ತಿಗೆ ಒಳಪಡದ ಜನರ ವಿರುದ್ಧವಾಗಿ 'ಸಾಮಾಜಿಕ ಬಹಿಷ್ಕಾರ'ದ ಬಾಣವನ್ನು ಬಳಸುವುದೊಂದೇ ನಾಡಿನ ಪ್ರಗತಿಗಿರುವ ಮಾರ್ಗ. ಕೊನೆಯ ಪಕ್ಷ ಎಸ್.ಎಸ್.ಎಲ್.ಸಿ. ಮಟ್ಟದ ಕನ್ನಡ ಬರದವರ ನಾಡಿನ ಯಾವ ಮೂಲಗಳಲ್ಲಿಯ ಒಂದಂಗುಲ ನೆಲವನ್ನಾಗಲೀ, ನಿವೇಶವನ್ನಾಗಲಿ ಕೊಡಬಾರದು, ಚುನಾವಣೆಯಲ್ಲಿ ಗೆಲ್ಲಿಸಬಾರದು. ಕನ್ನಡದ ಕೋಟೆ ಭದ್ರ ವಾಗಿದ್ದರೆ ಮಾತ್ರ ಜಾಗತೀಕರಣದ ಅಥವಾ ದೆಹಲೀಕರಣದ ಅಪಾಯವನ್ನು ತಡೆಗಟ್ಟಲು ಸಾಧ್ಯವಾಗುತ್ತದೆ.

ಪ್ರಾಥಮಿಕ ಶಾಲೆಯ ಇಂಗ್ಲಿಷ್ ಬೋಧನಾ ವಿಷಯ ಇದೀಗ ವಿವಾದದ ಸಂಗತಿಯಾಗಿದೆ. ನಮಗೆ ಇಂಗ್ಲೀಷ್ ಅತ್ಯಗತ್ಯ ನಿಜ. ಅದು ಯಾರಿಗೆ, ಯಾವಾಗ ಎಷ್ಟು ಎಂಬ ಔಚಿತ್ಯ ಜ್ಞಾನ ನಮಗಿರಬೇಕಾಗಿದೆ. ದೇಶದ ಹೊರಗೆ ಹೋಗುವವರ ಮತ್ತು ಬಹುರಾಷ್ಟ್ರೀಯ ಸಂಸ್ಥೆಗಳಲ್ಲಿ ಕೆಲಸ ಹುಡುಕುವವರ ಸಂಖ್ಯೆ ಎಷ್ಟಿದೆ? ಹೆಚ್ಚೆಂದರೆ ಮೂರ್‍ನಾಲ್ಕು ಲಕ್ಷ. ದೇಶದ ಒಟ್ಟೂ ಜನ ಸಂಖ್ಯೆಯಲ್ಲಿ ಈ ಸಂಖ್ಯೆ ಅತ್ಯಲ್ಪ. ಇತರರು ಇಂಗ್ಲೀಷ್ ಕಲಿಯ ಬಾರದೆಂದಿಲ್ಲ.

ಮೊದಲೆರಡು ಮೂರು ವರ್ಷ ಪ್ರಾದೇಶಿಕ ಅಥವಾ ಮಾತೃ ಭಾಷೆಯನ್ನು ಚೆನ್ನಾಗಿ ಕಲಿತ ನಂತರ ಒಂದಲ್ಲ ಹಲವು ಪರಭಾಷೆಗಳನ್ನು ಕಲಿಸುವುದು ಸುಲಭ. ಪ್ರಾರಂಭ ದಿಂದಲೇ ಎರಡು ಮೂರು ಭಾಷೆಗಳ ಭಾರವನ್ನು ಹೊರಿಸುವುದಾದರೆ, ಭಾಷಾಜ್ಞಾನ, ವಿಷಯಜ್ಞಾನ, ಆಲೋಚನಾ ಸಾಮರ್ಥ್ಯಗಳು ಪೂರ್ಣವಾಗಿ ವಿಕಾಸ ಗೊಳ್ಳದೆ, ಮಕ್ಕಳಿಗೆ ತ್ರಿಶಂಕು ಸ್ವರ್ಗವೇ ಗತಿಯಾಗುತ್ತದೆ. ಶೈಕ್ಷಣಿಕ ಮತ್ತು ಮನೋವೈಜ್ಞಾನಿಕ ಪ್ರಜ್ಞೆ ಇದ್ದವರಿಗೆ, ಸಾಕಷ್ಟು ಪ್ರಯೋಗಾತ್ಮಕ ಅನುಭವವಿದ್ದವರಿಗೆ ಮಾತ್ರ ಈ ಸಮಸ್ಯೆ ಅರ್ಥವಾದೀತು. ನಮ್ಮ ಮಕ್ಕಳಿಗೆ ಮೊದಲು ಬೇಕಾದದ್ದು ಜ್ಞಾನ; ಅನ್ಯಭಾಷೆಗಳ ಪರಿಚಯ ಆನಂತರ.

ಈಗ ಪ್ರೌಢಶಾಲೆಗಳಲ್ಲಿಯೇ ಇಂಗ್ಲೀಷ್ ಕಲಿಕೆ ಅತ್ಯಂತ ಕೆಳಮಟ್ಟದಲ್ಲಿದೆ. ಮೂರು ಇಂಗ್ಲಿಷ್ ಶಾಲೆಗಳನ್ನು ನಡೆಸುತ್ತಿರುವ ನನಗೆ ಆ ಮಕ್ಕಳನ್ನು ನೋಡುವಾಗ ಮಾತಾಡಿಸುವಾಗ ತುಂಬ ಸಂಕಟವಾಗುತ್ತದೆ. ಇಂಗ್ಲೀಷ್ ಉಪಾಧ್ಯಾಯರಿಗೇ ಇಂಗ್ಲೀಷ್ ಬರುವುದಿಲ್ಲ.

ಇಂಗ್ಲಿಷ್ ವ್ಯಾಕರಣವಂತೂ ಸೊನ್ನೆ, ಉಚ್ಚಾರಣೆಯೂ ಅಷ್ಟಕಷ್ಟೇ. ಹತ್ತನೆಯ ತರಗತಿಯ ಮಕ್ಕಳಿಗೆ ದೇಹದ ಅಂಗಾಂಗಗಳ ಹೆಸರು ಗೊತ್ತಿಲ್ಲ. ಅಂಥವರೂ ತೇರ್ಗಡೆ ಹೊಂದಿ, ಪಿಯುಸಿ ಸೇರಿದ್ದಾರೆ. ಹೇಗೆ ತೇರ್ಗಡೆ ಹೊಂದಿದರೋ ಕಾಣೆ. ನನಗೇನೇ ಅದು ಅಚ್ಚರಿಯ ಸಂಗತಿಯಾಗಿದೆ. ಸಾಮಾಜಿಕ ಅನ್ಯಾಯ, ನಗರ-ಗ್ರಾಮ ತಾರತಮ್ಯ, ಜಾಗತೀಕರಣ, ಹೀಗೆ ಏನೇನೋ ನೆಪವೊಡ್ಡಿ ಬಡವರ, ಕೆಳವರ್ಗದವರ ಮಕ್ಕಳನ್ನು ಹಾಳುಮಾಡುವ ಹುನ್ನಾರ ನಡೆದಿದೆ. ಹೈಸ್ಕೂಲುಗಳಲ್ಲಿ ಇಂಗ್ಲೀಷ್ ಕಲಿಸುವ ಉಪಾಧ್ಯಾಯರ ಕಷ್ಟ ಸಂಕಟ ದೌರ್ಬಲ್ಯಗಳನ್ನು ನಾನು ಪ್ರತ್ಯಕ್ಷವಾಗಿ ಕಂಡಿದ್ದೇನೆ. ಸರ್ಕಾರದ ಆಡಳಿತ ಯಂತ್ರಕ್ಕೆ ಸಂಬಂಧಪಟ್ಟ ಮಂತ್ರಿಗಳಿಗೆ ಈ ಪರಿಸ್ಥಿತಿ ಗೊತ್ತೆ? ನಾನು ನಡೆಸುತ್ತಿರುವ ಶಾಲೆಗಳಿಗವರು ಬರಲಿ, ನಿಜಸ್ಥಿತಿ ಯನ್ನವರಿಗೆ ಪರಿಚಯಿಸುತ್ತೇನೆ.

ಪ್ರಾಥಮಿಕ ಶಾಲೆಗಳಲ್ಲಿ ಇಂಗ್ಲೀಷ್ ಕಲಿಸಬಲ್ಲ ಉಪಾಧ್ಯಾಯರಿದ್ದಾರೆಯೇ? ಈಗ ಅನುದಾನಿತ ಶಾಲೆ ಗಳಲ್ಲಿ ಖಾಲಿಯಾದ ಉಪಾಧ್ಯಾಯರ ಸ್ಥಾನಗಳನ್ನು ಭರ್ತಿಮಾಡಲು ಸರ್ಕಾರ ಅವಕಾಶ ಕೊಟ್ಟಿಲ್ಲ.

ಸರ್ಕಾರಿ ಅನುದಾನಿತ-ಅನುದಾನ ವಂಚಿತ ಶಾಲಾ ಕಾಲೇಜುಗಳ ನಡುವೆ ದೂರದ ಧೂಮ್ಯಂತರದ ತಾರತಮ್ಯ ಭಾವವಿದೆ. ಸಾಮಾಜಿಕ ಸಮಾನತೆಯ ಬಗ್ಗೆ ಮಾತಾಡುವ ವಿದ್ವಾಂಸರಿಗೆ ಶಿಕ್ಷಣ ಕ್ಷೇತ್ರದಲ್ಲಿ ನಡೆಯುತ್ತಿರುವ ಅನ್ಯಾಯ ಪರಂಪರೆಯ ಅರಿವಿದೆಯೆ? ಈ ಬಗ್ಗೆ ಪ್ರಯೋಗಾನು ಭವವುಳ್ಳ ಚಿಂತಕರ, ತಜ್ಞರ ಸಲಹೆಯನ್ನು ಪಡೆಯದೆ, ಜಟಿಲಗೊಳಿಸುವುದಾಗಲಿ, ಶಿಕ್ಷಣದ ಮಟ್ಟವನ್ನು ಇಳಿಸುವುದಾಗಲಿ ತರವಲ್ಲ.



ಪ್ರಾಥಮಿಕ ಶಾಲೆಯ ಪ್ರಥಮ ತರಗತಿಯಿಂದಲೇ ಮಕ್ಕಳಿಗೆ ಇಂಗ್ಲಿಷ್ ಕಲಿಸುವುದರಿಂದುಂಟಾಗುವ ಅನಾಹುತ ಗಳ ಕಡೆಗೆ ನಮ್ಮ ವಿದ್ವಾಂಸರ ಗಮನ ಹರಿಯದಿರುವುದು ಶೋಚನೀಯ ಸಂಗತಿ. ಅದು ಮಕ್ಕಳ ಸೃಜನ ಶೀಲ ಬೌದ್ಧಿಕ ಬೆಳವಣಿಗೆಗೆ ಅಡ್ಡಿಯಾಗುತ್ತದೆ. ಅವರ ಶ್ರಮ ಸಮಯಗಳು ಇಂಗ್ಲಿಷ್ ಕಲಿಕೆಯಲ್ಲಿಯೇ ಪೋಲಾಗುತ್ತವೆ. ಇಂಗ್ಲಿಷ್ ಪುಸ್ತಕಗಳ ಓದು, ಇಂಗ್ಲೀಷ್ ವರ್ತಮಾನ ಪತ್ರಿಕೆಗಳ ಪಠನ ಮತ್ತು ಇಂಗ್ಲೀಷ್ ದೂರದರ್ಶನದ ನೋಟದಲ್ಲಿ ಮಕ್ಕಳು ಇಡೀ ದಿನ ಮುಳುಗಿರುತ್ತಾರೆ.

ಹೀಗಾಗಿ ಕನ್ನಡ ಭಾಷೆ, ಸಾಹಿತ್ಯ, ಸಮೂಹ ಮಾಧ್ಯಮಗಳ ಬಗ್ಗೆ, ಕನ್ನಡ ಸಂಸ್ಕೃತಿಯ ಬಗ್ಗೆ ಅವರ ಮನಸ್ಸಿನಲ್ಲಿ ತಿರಸ್ಕಾರ, ನಿರ್ಲಕ್ಷ್ಯ, ತಾತ್ಸಾರಗಳು ನೆಲೆಯೂರುತ್ತವೆ. ಅವರ ಇಡೀ ಬದುಕನ್ನೇ ಆಕ್ರಮಿಸಿ ಕೊಳ್ಳುತ್ತವೆ. ಅವರು ಸ್ವದೇಶದಲ್ಲಿಯೇ ಪರಕೀಯ ರಾಗುತ್ತಾರೆ. ಜಾಗತೀಕರಣದ ಹಿನ್ನಲೆಯಲ್ಲಿ ಇಂಗ್ಲೀಷ್ ಕಲಿತವರು ಪ್ರಬಲ ರಾಷ್ಟ್ರಗಳ ಪರೋಕ್ಷ ವಸಾಹತು ಶಾಹಿಯ ದಾಸರಾಗುತ್ತಾರೆ. ಅನಿವಾರ್ಯತೆ, ಅವಶ್ಯಕತೆ, ಬೇಡಿಕೆಗಳನ್ನು ಆಧಾರವಾಗಿಟ್ಟುಕೊಂಡು ಭಾಷಾ ಕಲಿಕೆಯ ನೀತಿಯನ್ನು ರೂಪಿಸಬೇಕಾದ್ದು ವಿವೇಕಿಗಳ ಧರ್ಮ.

ನಾಲ್ಕು ಭಾಷೆಗಳನ್ನು ಚಾಲ್ತಿಯಲ್ಲಿರುವ ಸ್ವಿಟ್ಜರ್ಲೆಂಡ್ ದೇಶದ ಭಾಷಾನೀತಿ ನಮ್ಮ ದೇಶಕ್ಕೆ ಉಚಿತ ಹಾಗೂ ಆದರ್ಶವೆಂದು ಸ್ಪಷ್ಟಪಡಿಸಬಹುದಾಗಿದೆ. ನಮ್ಮ ಆಡಳಿತ ಗಾರರು ಮತ್ತು ರಾಜಕೀಯ ನಾಯಕರು ಅಲ್ಲಿಯ ಭಾಷಾ ನೀತಿಯನ್ನು ಕೂಲಂಕುಷವಾಗಿ ಅಧ್ಯಯನ ಮಾಡಿ ಅದೇ ನೀತಿಯನ್ನು ಇಲ್ಲಿಯೂ ಅನುಸರಿಸಿದ್ದಾದರೆ, ಈ ದೇಶದ ಭಾಷಾ ಸಮಸ್ಯೆ ಶಾಶ್ವತವಾಗಿ ಪರಿಹಾರವಾಗುತ್ತದೆ.

ಆದರೆ, ಭಾಷಾಂಧರಿಗೆ, ಭಾಷಾ ಸಾಮ್ರಾಜ್ಯ ವಾದಿಗಳಿಗೆ ಕಲಹ ಲಂಪಟರಿಗೆ ಹಾಗೂ ರಾಷ್ಟ್ರೀಯ ಏಕತಾ ವಿರೋಧಿಗಳಿಗೆ ಶಾಶ್ವತ ಪರಿಹಾರ ಹಿಡಿಸುವುದಿಲ್ಲ. ಹಲವು ಪ್ರಾಚೀನ ಪ್ರಬುದ್ಧ ಶ್ರೀಮಂತ ಭಾಷೆಗಳು ದೇಶದ ಬೌದ್ಧಿಕ ಹಾಗೂ ಸಾಂಸ್ಕೃತಿಕ ಸಂಪತ್ತು. ಅವುಗಳಿಗೆ ಸಮಾನ ಗೌರವ ಸ್ಥಾನ ಮಾನಗಳನ್ನು ನೀಡಿದಾಗ ಮಾತ್ರ ರಾಷ್ಟ್ರೀಯತೆ ಸದೃಢವಾಗುತ್ತದೆ, ಏಕತೆ ಸ್ಥಿರವಾಗುತ್ತದೆಂಬ ಸತ್ಯ ಅವರ ಪೂರ್ವಾನುಗ್ರಹಪೀಡಿತ ಮಂದಬುದ್ಧಿಗಳಿಗೆ ಹಿಡಿಸುವುದಿಲ್ಲ.

ಕೇಂದ್ರ ಸರ್ಕಾರದ ಮೂಲಗಳೆಂದರೆ ರಾಜ್ಯಗಳು. ಅಷ್ಟೇ ಅಲ್ಲ, ಕೇಂದ್ರ ಸರ್ಕಾರವಿರುವುದೇ ರಾಜ್ಯಗಳಿಗಾಗಿ. ಆದ್ದರಿಂದ ಕೇಂದ್ರ ಸರ್ಕಾರದ ನಿರ್ವಹಣೆಯಲ್ಲಿ ಎಲ್ಲ ರಾಜ್ಯಗಳಿಗೂ ಸಮಾನಾವಕಾಶಗಳಿರಬೇಕು. ಕೇಂದ್ರ ಸರ್ಕಾರದ ಎಲ್ಲ ಕಛೇರಿಗಳಲ್ಲಿ ಮುಖ್ಯವಾಗಿ ದೆಹಲಿಯ ಕಾರ್ಯಸೌಧದಲ್ಲಿ ರಾಜ್ಯಗಳ ಜನಸಂಖ್ಯೆಯ ಆಧಾರದ ಮೇಲೆ ಗುಮಾಸ್ತ ದರ್ಜೆಯಿಂದ ಹಿಡಿದು ಅತ್ಯುನ್ನತ ಅಧಿಕಾರಿ ಸ್ಥಾನದವರೆಗೆ ನೌಕರರು ನೇಮಕವಾಗಿರಬೇಕು. ಹಾಗಿದ್ದಾಗ ಮಾತ್ರ ಎಲ್ಲ ರಾಜ್ಯಗಳಿಗೂ ನ್ಯಾಯ ದೊರತಂತಾಗುತ್ತದೆ. ಕೇಂದ್ರ ಸರ್ಕಾರದ ಬಗ್ಗೆ ಅವುಗಳಲ್ಲಿ ವಿಶ್ವಾಸ ಮೂಡುತ್ತದೆ. ಇತ್ತೀಚೆಗೆ ಆಂಧ್ರ ಪ್ರದೇಶ ಸರ್ಕಾರ ಕೃಷ್ಣಕೊಳ್ಳದಲ್ಲಿ ನೆರೆರಾಜ್ಯಗಳಿಗೆ ಅನಾನುಕೂಲವಾಗುವಂಥ ಅನಧಿಕೃತ ನೀರಾವರಿ ಯೋಜನೆಗಳನ್ನು ಕಾರ್ಯಗತಗೊಳಿಸುತ್ತಿರು ವುದಂಟಷ್ಟೇ. ತೆಲುಗನೊಬ್ಬ ಕೇಂದ್ರ ಸರ್ಕಾರದಲ್ಲಿ ಕಾರ್ಯದರ್ಶಿಯಾಗಿದ್ದುದೇ ಈ ಅನ್ಯಾಯಗಳಿಗೆ ಅವಕಾಶವಾಯಿತೆಂದು ಪತ್ರಿಕೆಗಳಲ್ಲಿ ಸುದ್ದಿ ಬಂತು. ಕರ್ನಾಟಕದ ನೌಕರರು ಕೇಂದ್ರ ಸರ್ಕಾರದ ಕಾರ್ಯಸೌಧ ದಲ್ಲಿದ್ದದ್ದೇ ಆದರೆ, ಇಂಥ ಅನ್ಯಾಯಗಳು ನಡೆಯುತ್ತಿರಲಿಲ್ಲ. ದೆಹಲಿ ಎಲ್ಲ ರಾಜ್ಯಗಳ ರಾಜಧಾನಿ ಎನ್ನುವ ಭಾವನೆ ಮೂಡುವಂತಾದಾಗ, ರಾಷ್ಟ್ರೀಯ ಏಕತೆ ಸಾಧ್ಯವಾಗುತ್ತ ದೆಂಬ ಸತ್ಯವನ್ನು ದೆಹಲಿಯ ದೊರೆಗಳು ಅರಿಯಬೇಕಾಗಿದೆ.

ಕೇಂದ್ರ ಸರ್ಕಾರದಿಂದ ಕರ್ನಾಟಕಕ್ಕಾಗಿರುವ ಅನ್ಯಾಯದ ಬಗ್ಗೆ ಮತ್ತೊಂದು ನಿದರ್ಶನವನ್ನು ನೀಡ ಬಹುದು. ಅದು ಶಾಸ್ತ್ರೀಯ ಸಾಹಿತ್ಯಕ್ಕೆ ಸಂಬಂಧಿಸಿದ್ದು. ತಮಿಳು ಸಾಹಿತ್ಯವನ್ನು ಶಾಸ್ತ್ರೀಯ ಸಾಹಿತ್ಯವೆಂದು ಘೋಷಿಸುವುದಕ್ಕೆ ಮೊದಲೇ ನಿಯಮಗಳನ್ನು ರೂಪಿಸಿ, ಸಮಿತಿಯೊಂದನ್ನು ರಚಿಸಿ, ಎಲ್ಲ ಭಾರತೀಯ ಭಾಷೆಗಳ ಸಾಹಿತ್ಯವನ್ನು ಗಣನೆಗೆ ತೆಗೆದುಕೊಳ್ಳಬಹುದಿತ್ತು. ಶಾಸ್ತ್ರೀಯ ಸಾಹಿತ್ಯದ ಗೌರವಕ್ಕೆ ಕನ್ನಡ ತಮಿಳಿನಷ್ಟೇ ಒಂದು ಕೈ ಮಿಗಿಲಾಗಿಯೇ ಅರ್ಹವಾದದ್ದೆಂಬ ಸತ್ಯ ಕೇಂದ್ರ ಸರ್ಕಾರದ ಅವಿವೇಕಿಗಳಿಗೆ ಅರಿವಾಗಬೇಕಾಗಿತ್ತು.

ಇತ್ತೀಚಿನ ವರ್ಷಗಳಲ್ಲಿ ತಮಿಳುನಾಡಿನ ವಿಧಾನಸಭೆ ಯಲ್ಲಿ 'ತಿರುಕ್ಕುರುಳ್' ಗ್ರಂಥ ರಾಷ್ಟ್ರೀಯ ಸಾಹಿತ್ಯ ಕೃತಿಯೆಂದು ಸರ್ವಾನುಮತದಿಂದ ತೀರ್ಮಾನ ವಾಗಿದೆಯಷ್ಟೆ. ಕನ್ನಡ ವಚನ ಹಾಗೂ ದಾಸ ಸಾಹಿತ್ಯಗಳಿಗೆ ಸರಿಸಾಟಿಯಾದ ಸಾಹಿತ್ಯ ಜಗತ್ತಿನ ಯಾವ ಭಾಷೆಯಲ್ಲಿಯೂ ಇಲ್ಲ. 'ಸಮಗ್ರ ಕ್ರಾಂತಿಯ' ಪ್ರತೀಕ ವಚನ ಸಾಹಿತ್ಯ; ದೇಶ, ಕಾಲಾತೀತ ಮೌಲ್ಯಗಳ ಮೂಲನಿಧಿ ವಚನ ಸಾಹಿತ್ಯ. ಈ ಎಲ್ಲ ಸಾಹಿತ್ಯದ ಪ್ರತಿನಿಧಿ ಸ್ವರೂಪದ 'ಬಸವೇಶ್ವರ ವಚನ'ಗಳನ್ನು 'ರಾಷ್ಟ್ರೀಯ ಸಾಹಿತ್ಯ ಕೃತಿ' ಯೆಂದು ಕರ್ನಾಟಕ ಶಾಸನ ಸಭೆ ಅಂಗೀಕರಿಸಬೇಕೆಂದು ಕನ್ನಡಿಗರು ಒಕ್ಕೊರಲಿನಿಂದ ಒತ್ತಾಯಿಸಬೇಕಾಗಿದೆ.





## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿ ಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ **ನಗದು/ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (ಐಡಿ) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ. ವಾರ್ಷಿಕ ಚಂದಾದಾರರು ತಮ್ಮ ಸದಸ್ಯತ್ವದ ಅವಧಿ ಮುಗಿದಿದ್ದರೆ ನವೀಕರಿಸಿ ಕೊಳ್ಳಬೇಕೆಂದು ಕೋರುತ್ತೇವೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೩೨೨



ಶ್ರೀಮಠದಲ್ಲಿ ಆಯುಧ ಪೂಜೆ ಹಾಗೂ ವಿಜಯದಶಮಿ ಪೂಜಾ ಕಾರ್ಯಕ್ರಮದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಾಗೂ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಸಾನ್ನಿಧ್ಯ ವಹಿಸಿದ್ದರು.



ಶ್ರೀಮಠದ ಭಕ್ತರಾದ ಶ್ರೀಮತಿ ಸಾವಿತ್ರಮ್ಮ ಮತ್ತು ಶ್ರೀ ಜಿ.ಎನ್. ಮುದ್ದಪ್ಪ ದಂಪತಿಗಳು ಶ್ರೀಮಠದ ನಿತ್ಯಾದಾಸೋಹಕ್ಕಾಗಿ ೮,೦೦,೧೦೮/- ರೂ.ಗಳ ಡಿ.ಡಿ.ಯನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಅರ್ಪಿಸಿದರು

### ಶ್ರೀವಾಣಿ

ಮನುಷ್ಯ ಶ್ರಮಜೀವಿಯಾಗಬೇಕು. ಕಾಯಕ ಮಾಡುವಂತವನಾಗಬೇಕು. ವೃಥಾ ಕಾಲಹಾನಿ ಮಾಡಬಾರದು. ಫಲ ಬೇಕಾದರೆ ಕಾಯಕ ಮಾಡಿ ಫಲವನ್ನು ಸ್ವೀಕಾರ ಮಾಡಬೇಕು. ಮನುಷ್ಯ ಕಾಯಕ ಜೀವಿಯಾಗಿ ತತ್ತ್ವ ನಿಷ್ಠನಾಗಿ ತನ್ನ ಕರ್ತವ್ಯ ಚೆನ್ನಾಗಿ ಮಾಡಬೇಕು. ಆಗ ತಾನಾಗಿಯೇ ಫಲ ದೊರೆಯುತ್ತದೆ.





ನುಡಿನಮನ

# ಬಸವತತ್ತ್ವ ಆರಾಧಕ, ಮಹಾಮಾನವತಾವಾದಿ ಗದುಗಿನ ಡಾ. ಶ್ರೀ ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು

- ಎಚ್.ಎಸ್. ಸಿದ್ಧಗಂಗಪ್ಪ *



ಬಸವತತ್ತ್ವ ಆರಾಧಕ, ಕ್ರಾಂತಿಯೋಗಿ, ಔದಾರ್ಯದ ದೇವರು, ಕನ್ನಡಪರ ಕಾಳಜಿಯುಳ್ಳ ನುಡಿಸೇವಕ, ಸಾಹಿತ್ಯ ದಾಸೋಹ ಹರಿಕಾರ, ಆಧ್ಯಾತ್ಮದ ಮೇರು ಶಿಖರ, ಮಹಾನ್ ಚಿಂತಕ, ಮಹಾಮಾನವತಾವಾದಿ, ಬಸವಣ್ಣನವರ ಆದರ್ಶಗಳನ್ನು, ಜೀವನ ಸಿದ್ಧಾಂತಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಅನುಷ್ಠಾನಗೊಳಿಸಿದ ಮಹಾಚೇತನ, ಪ್ರಗತಿಪರ ರೈತ, ಶ್ರೇಷ್ಠಜ್ಞಾನಿ, ಪರಿಸರ ಪ್ರೇಮಿ, ಕಾಯಕಯೋಗಿ, ತ್ರಿವಿಧ ದಾಸೋಹಿ-ಇವೆಲ್ಲಾ ಗುಣಗಳ ಮಹಾಸಂಗಮ, ಪರಮಪೂಜ್ಯ ಡಾ. ಶ್ರೀ ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರು ಎಂದು ಹೇಳುವಾಗ ಧನ್ಯತಾಭಾವನೆ ಮೂಡುತ್ತದೆ. ಅವರು ನಾಡಿನ ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಿಗೆ ನೀಡಿದ ಕೊಡುಗೆ ಅಮೂಲ್ಯವಾದುದು. ಇತಿಹಾಸದ ಪುಟಗಳಲ್ಲಿ ದಾಖಲಿಸಬಹುದಾದ ಅಪೂರ್ವ ಸಾಧನೆಗಳು

ಸುಮಾರು ೬೦೦ ವರ್ಷಗಳ ಭವ್ಯ ಇತಿಹಾಸ ಪರಂಪರೆಯುಳ್ಳ ಶೂನ್ಯ ಸಿಂಹಾಸನ ಪರಂಪರೆಯ ಗದುಗಿನ ತೋಂಟದಾರ್ಯ ಮಠದ ೧೯ನೇ ಜಗದ್ಗುರುಗಳಾಗಿ ಪೂಜ್ಯ ಶ್ರೀಗಳವರು ತಾವು ಅಧಿಕಾರ ವಹಿಸಿಕೊಂಡು ೪೪ ವರ್ಷಗಳಲ್ಲಿ ಮಾಡಿದ ಸಮಾಜಮುಖಿ ಸೇವೆ, ಕೈಗೊಂಡ ಅಭಿವೃದ್ಧಿ ಕಾರ್ಯಗಳು ಅವರ ಕ್ರಿಯಾಶೀಲತೆ, ದೂರದೃಷ್ಟಿ, ಕತೃತ್ವಶಕ್ತಿಯ ದ್ಯೋತಕಗಳಾಗಿವೆ

**ಜನನ** : ಫೆಬ್ರವರಿ ೨೧, ೧೯೪೯ ರಂದು ಬಿಜಾಪುರ ಜಿಲ್ಲೆಯ ಸಿಂಧಗಿಯಲ್ಲಿ ಶರಣ ದಂಪತಿಗಳಾದ ಶ್ರೀ ಮರಯ್ಯಸ್ವಾಮಿ ಮತ್ತು ಶ್ರೀಮತಿ ಶಂಕರವ್ವ ಅವರ ಎರಡನೇ ಪುತ್ರರತ್ನವಾಗಿ ಜನಿಸಿದರು. ತಂದೆ ತಾಯಿಗಳು ಪ್ರೀತಿಯಿಂದ,



*೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೬೧

ಮಠಾಧೀಶರು, ಸಾಹಿತಿಗಳು ಹಾಗೂ ಗಣ್ಯರೊಂದಿಗೆ ಪೂಜ್ಯ ತೋಂಟದ ಶ್ರೀಗಳು

ಅಕ್ಕರೆಯಿಂದ ಇಟ್ಟ ಹೆಸರು ಸಿದ್ಧರಾಮ. ತಮ್ಮ ಮಗ ಮುಂದೆ ಮಹಾಶರಣ, ಕರ್ಮಯೋಗಿ ಸಿದ್ಧರಾಮನಂತೆ ಸಮಾಜ ಸೇವೆ ಮಾಡುತ್ತಾ, ಲೋಕ ವಿಖ್ಯಾತಿಯಾಗಲಿ ಎಂಬ ಹಾರೈಕೆ ಅವರದಾಗಿತ್ತು. ಅವರ ಆಶೀರ್ವಾದ, ಹಾರೈಕೆ ಹುಸಿಯಾಗಲಿಲ್ಲ!

**ಶಿಕ್ಷಣ** : ಪ್ರಾಥಮಿಕ ಶಿಕ್ಷಣ ಸಿಂಧಗಿ ಮಠದ ಪೀಠಾಧಿಪತಿಗಳಾಗಿದ್ದ ಶಾಂತವೀರಯ್ಯನವರ ಮಾರ್ಗದರ್ಶನದಲ್ಲಿ ನಡೆಯಿತು. ಸಿದ್ಧರಾಮನಿಗೆ ಓಂ ನಾಮ ಕಲಿಸಿದ ಮೊದಲ ಗುರು ಸಿ.ಎಂ. ಮಣ್ಣೂರು ಅವರು. ಶಾಂತವೀರಯ್ಯ ಸ್ವಾಮಿಗಳು ಮಠದಲ್ಲಿ ಅನೇಕ ಬಡ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಭವಿಷ್ಯವನ್ನು ರೂಪಿಸಲು ನೆರವಾಗಿದ್ದರು. ಮಠದಲ್ಲಿ ರೋಗಿಗಳಿಗೆ ವನಸ್ಪತಿ ಔಷಧಿಯನ್ನು ಕೊಟ್ಟು ಗುಣಪಡಿಸುತ್ತಿದ್ದರು. ಬಾಲಕ ಸಿದ್ಧರಾಮರು ಈ ಎಲ್ಲಾ ಕೆಲಸಗಳಿಗೆ ನೆರವಾಗುವುದರ ಮೂಲಕ ಸಮಾಜ ಸೇವೆಯಲ್ಲಿ ತೊಡಗಿಸಿಕೊಳ್ಳುವ ಪೂರ್ವ ತರಬೇತಿ ಶಿಬಿರವಾಗಿತ್ತು. ಸಿದ್ಧರಾಮರಿಗೆ ಶಾಂತವೀರಯ್ಯ ಸ್ವಾಮಿಗಳು ಹಾಗೂ ಸಿ.ಎಂ. ಮಣ್ಣೂರು ಅವರು ಆದರ್ಶ ವ್ಯಕ್ತಿಯಾಗಿದ್ದರು. ಅವರ ಆದರ್ಶದ ಮುಂಬೆಳಕಿನಲ್ಲಿ ತಮ್ಮ ಬದುಕನ್ನು ರೂಪಿಸಿಕೊಂಡು ಮುನ್ನಡೆಯುತ್ತಾ ಬಂದರು.

ಸಿಂಧಗಿಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ ನಂತರ ಸಂಸ್ಕೃತ ಕಲಿಯಲು ಹುಬ್ಬಳ್ಳಿಯ ಮೂರು ಸಾವಿರ ಮಠಕ್ಕೆ ಹೋಗಿ, ಗಂಗಾಧರ ಪ್ರೌಢಶಾಲೆಯಲ್ಲಿ ಪ್ರಥಮ, ಕಾವ್ಯ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಆಗಲೇ ಪ್ರಸಿದ್ಧ ಕಾದಂಬರಿಕಾರರ ಕಾದಂಬರಿಗಳನ್ನು, ಕವನಗಳನ್ನು ಓದಿ, ಅರ್ಥಮಾಡಿಕೊಂಡು ಸ್ನೇಹಿತರೊಂದಿಗೆ ಮುಕ್ತವಾಗಿ ಚರ್ಚಿಸುವುದರ ಮೂಲಕ ತಮ್ಮ ಅರಿವಿನ ದಿಗಂತವನ್ನು ವಿಸ್ತರಿಸಿಕೊಂಡರು. ಹುಬ್ಬಳ್ಳಿಯ 'ಸಾಹಿತ್ಯ ಭಂಡಾರ' ಪುಸ್ತಕ ಅಂಗಡಿಯ ಮಾಲೀಕರ ಪರಿಚಯ ಮಾಡಿಕೊಂಡು ಅಲ್ಲಿದ್ದ ಎಲ್ಲಾ ಗ್ರಂಥಗಳ ಅಧ್ಯಯನ ಮಾಡಿದರು. ತಾವು ಓದಿದುದನ್ನು ಗೆಳೆಯರೊಂದಿಗೆ ಹಂಚಿಕೊಳ್ಳುತ್ತಿದ್ದರು. ಆಗಲೇ ಅವರಲ್ಲಿ ನಾಡು, ನುಡಿಯ ಬಗ್ಗೆ ಪ್ರೀತಿ, ಅಭಿಮಾನ ಮೊಳಕೆಯೊಡೆಯ ತೊಡಗಿತ್ತು.

೧೯೬೬ ರಲ್ಲಿ ಪ್ರೌಢಶಿಕ್ಷಣವನ್ನು ಮುಗಿಸಿ ೧೯೬೭ ರಲ್ಲಿ ಕಾಡಸಿದ್ಧೇಶ್ವರ ಕಾಲೇಜಿನಲ್ಲಿ ಸಂಸ್ಕೃತ, ಸಮಾಜಶಾಸ್ತ್ರ ಮತ್ತು ಹಿಂದಿ ವಿಷಯಗಳನ್ನು ತೆಗೆದುಕೊಂಡು ಪಿ.ಯು.ಸಿ.ಯಲ್ಲಿ ಉತ್ತೀರ್ಣರಾದರು. ೧೯೭೦ ರಲ್ಲಿ ಬಿ.ಎ. ನಂತರ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಮತ್ತು ಜಾನಪದ ವಿಷಯವನ್ನು ತೆಗೆದುಕೊಂಡು ಸ್ನಾತಕೋತ್ತರ ಪದವಿಯನ್ನು ಪಡೆದರು.

ಸಿದ್ಧರಾಮರು ಎಳನೆಯ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವಾಗಲೇ, ಅವರ ಕ್ರಿಯಾಶೀಲತೆ, ಕಾರ್ಯತತ್ಪರತೆ, ಸಮಾಜ ಸೇವಾ ಗುಣವನ್ನು ಹತ್ತಿರದಿಂದ ಗಮನಿಸಿದ್ದ ಪೂಜ್ಯ ಶ್ರೀ ಶಾಂತವೀರ



ಸ್ವಾಮಿಗಳು ಸಿಂಧಗಿ ಮಠಕ್ಕೆ ತಮ್ಮ ಮುಂದಿನ ಉತ್ತರಾಧಿಕಾರಿಯೆಂದು ಘೋಷಿಸಿದ್ದರು. ಆದರೆ ಮುಂದೆ ನಡೆದ ವಿದ್ಯಮಾನವೇ ಬೇರೆಯಾಗಿತ್ತು. ದೈವಲೀಲೆಯನ್ನು ಬಲ್ಲವರಾರು !

ವೀರಶೈವ ಪ್ರಗತಿಶೀಲ ಯುವಕ ಸಂಘ, ತೋಂಟದಾರ್ಯ ಮಠದಲ್ಲಿ ಪ್ರತಿ ಸೋಮವಾರ ಶಿವಾನುಭವ ಕಾರ್ಯಕ್ರಮವನ್ನು ಆಯೋಜಿಸಿತ್ತು. ನವೆಂಬರ್ ೧೩, ೧೯೭೦ ರಿಂದ ಐದುವಾರ ಶಿವಾನುಭವ ಕಾರ್ಯಕ್ರಮದಲ್ಲಿ ಪ್ರವಚನ ನೀಡಲು ಸಿದ್ಧರಾಮರಿಗೆ ಆಹ್ವಾನ ಬಂದಿತು. ಹುಬ್ಬಳ್ಳಿಯ ಮೂರು ಸಾವಿರ ಮಠದ ಜಗದ್ಗುರುಗಳು ಬಯಸದೇ ಬಂದ ಅವಕಾಶವನ್ನು ಸದುಪಯೋಗಪಡಿಸಿಕೋ ಎಂದು ಆಶೀರ್ವದಿಸಿ ಕಳುಹಿಸಿಕೊಟ್ಟರು. ಶ್ರೀ ಸಿದ್ಧರಾಮರು ಐದು ವಾರ **'ನಡೆ ಕಲಿಸಿದ ಬಸವಣ್ಣ'** ಎಂಬ ವಿಷಯವನ್ನು ಕುರಿತು ವೈಚಾರಿಕತೆಯಿಂದ ಮಾತನಾಡಿ ಪ್ರೇಕ್ಷಕರನ್ನು ಆಶ್ಚರ್ಯಚಕಿತರನ್ನಾಗಿಸಿದರು. ಅಂದಿನ ಜಗದ್ಗುರುಗಳಾದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಇವರ ಅಸ್ಖಲಿತವಾಣಿ, ಬುದ್ಧಿಶಕ್ತಿಗೆ ಮನಸೋತು ಸಿದ್ಧರಾಮರನ್ನು ತಮ್ಮ ಮಠದ ಉತ್ತರಾಧಿಕಾರಿಯೆಂದು ದೃಢ ನಿಶ್ಚಯ ಮಾಡಿದರು. ಪೂಜ್ಯರ ತೀರ್ಮಾನಕ್ಕೆ ಮೂರು ಸಾವಿರ ಮಠದ ಜಗದ್ಗುರುಗಳು ಸಹಮತ ನೀಡಿದರು. ಸಿಂಧಗಿ ಮಠದ ಉತ್ತರಾಧಿಕಾರಿಯಾಗಬೇಕಾಗಿದ್ದ ಸಿದ್ಧರಾಮರು ಗದುಗಿನತ್ತ ಮುಖ ಮಾಡಿದರು.

**ಹತ್ತೊಂಬತ್ತನೆ ಪೀಠಾಧಿಪತಿಯಾಗಿ** : ಪೂಜ್ಯ ಶ್ರೀಗಳವರ ತೀರ್ಮಾನ, ಭಕ್ತರ ಸಹಕಾರ, ಒಮ್ಮತದ ಅಭಿಪ್ರಾಯದಂತೆ, ಜೂನ್ ೨೯, ೧೯೭೪ ರಂದು ನಡೆದ ಪಟ್ಟಾಧಿಕಾರ ಮಹೋತ್ಸವದಲ್ಲಿ ೧೯ನೇ ಪೀಠಾಧ್ಯಕ್ಷರಾಗಿ 'ಸಿದ್ಧಲಿಂಗ ಮಹಾಸ್ವಾಮಿಗಳೆಂಬ' ಅಭಿದಾನದಿಂದ ಶ್ರೀಮಠದ ಅಧಿಕಾರ ಸೂತ್ರವನ್ನು ಹಿಡಿದರು. ಈ ಅಭೂತಪೂರ್ವವಾದ ಸಮಾರಂಭಕ್ಕೆ ನೂರಾರು ಮಠಾಧೀಶರು, ಮಠದ ಭಕ್ತರು, ಅಭಿಮಾನಿಗಳು, ಗಣ್ಯರು ಸಾಕ್ಷಿಯಾದರು.

ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಅಧಿಕಾರ ವಹಿಸಿಕೊಂಡು ನೀಡಿದ ಮೊದಲ ನುಡಿಸಂದೇಶ : 'ಮಠದ ಆಸ್ತಿ, ಪೀಠ ನೋಡಿ, ನಾನು ಉತ್ತರಾಧಿಕಾರಿಯಾಗಿ ಈ ಮಠಕ್ಕೆ ಬಂದಿಲ್ಲ. ಗದುಗಿನ ಕ್ರಿಯಾಶೀಲ ಭಕ್ತರನ್ನು ಅಭಿಮಾನಿಗಳನ್ನು ನೋಡಿ ಹೃದಯತುಂಬಿ ಬಂದಿದ್ದೇನೆ'. ಈ ಮಂಗಳನುಡಿ ಭಕ್ತರ ಹೃದಯದಲ್ಲಿ ನವಚೈತನ್ಯವನ್ನು ಮೂಡಿಸಿತು. ಪೂಜ್ಯ ಶ್ರೀಗಳು ಅಧಿಕಾರ ವಹಿಸಿಕೊಂಡಾಗ ಮಠದ ಆರ್ಥಿಕ ಪರಿಸ್ಥಿತಿ ಚೆನ್ನಾಗಿರಲಿಲ್ಲ. ನಾಲ್ಕು ಜನ ಭಕ್ತರು ಬಂದರೆ ಅವರಿಗೆ ದಾಸೋಹ ವ್ಯವಸ್ಥೆ ಮಾಡದಷ್ಟು ಕೆಟ್ಟಿತ್ತು. ಪೂಜ್ಯರು ಎದೆಗುಂದದೆ ಸವಾಲನ್ನಾಗಿ ಸ್ವೀಕರಿಸಿ ಭಕ್ತರ ನೆರವು, ಸಹಕಾರದಿಂದ ಅಭಿವೃದ್ಧಿ ಪಥದಲ್ಲಿ ಮುನ್ನಡೆಸಲು ದೃಢಸಂಕಲ್ಪ ಮಾಡಿದರು.

**ಕೃಷಿ ಕಾಯಕ** : ಮಠಕ್ಕೆ ಸೇರಿದ ಬಂಜರು ಜಮೀನನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಮಾಡಲು ಅನೇಕ ಆಧುನಿಕ ಪದ್ಧತಿಗಳನ್ನು ಅನುಷ್ಠಾನ ಗೊಳಿಸಿದರು. ಸ್ವಾಮೀಜಿಯವರೇ ರೈತರಂತೆ ಕಾಯಕ ಯೋಗಿಯಾಗಿ ಹೊಲದಲ್ಲಿ ನೇಗಿಲು ಹಿಡಿದು ಉಳುಮೆ ಮಾಡಿದರು. ಬಾವಿ ತೋಡಿಸಿದರು. ದ್ರಾಕ್ಷಿ, ದಾಳಿಂಬೆಯಂಥ ವಾಣಿಜ್ಯ ಬೆಳೆಯನ್ನು ಬೆಳೆಯಲಾರಂಭಿಸಿದರು. ಇದರಿಂದ ಮಠದ ಆರ್ಥಿಕ ಪರಿಸ್ಥಿತಿ ಸುಧಾರಿಸಿತು. ದಾಸೋಹ ವ್ಯವಸ್ಥೆ ಸಮರ್ಪಕವಾಗಿ ನಡೆಸುವಂತಾಯಿತು. ಕೃಷಿಗೆ ಮಹತ್ವವನ್ನು ಕೊಡುವ ದೃಷ್ಟಿಯಿಂದ ಡಂಬಳದಲ್ಲಿ ಕೃಷಿ ಪ್ರಯೋಗ ಶಾಲೆಯನ್ನು ಪ್ರಾರಂಭಿಸಿದರು. ಬೆಳೆಗಳನ್ನು ಕುರಿತು ವಿಚಾರ ಸಂಕಿರಣ, ಕ್ಷೇತ್ರೋತ್ಸವ ನಡೆಸಿದರು. ಡಂಬಳದಲ್ಲಿ **'ಸೇವಾಲಾಲ ಸಸ್ಯಕಾಶಿ'** ಬೆಳೆಸಿ, ಶಾಲೆ-ಕಾಲೇಜುಗಳಿಗೆ ಸಸ್ಯಗಳನ್ನು ವಿತರಣೆ ಮಾಡಿಸಿ, ಗಿಡಗಳನ್ನು ಬೆಳೆಸಲು ಪ್ರೋತ್ಸಾಹಿಸಿದರು. ಪರಿಸರದ ಮಹತ್ವದ ಬಗ್ಗೆ ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿಕೊಟ್ಟರು. ಪೂಜ್ಯರು ಸ್ಥಾಪಿಸಿದ 'ಸೇವಾಲಾಲ ಸಸ್ಯಕಾಶಿ' ಇಂದು ಬೃಹತ್ತಾಗಿ ಬೆಳೆದಿದೆ.







**ಬಸವಣ್ಣನವರ ಆದರ್ಶ :** ಬಸವಣ್ಣನವರ ಜೀವನ ಮೌಲ್ಯಗಳನ್ನು, ಸಿದ್ಧಾಂತಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಶ್ರೀಮಠದಲ್ಲಿ ಸಾಕಾರಗೊಳಿಸಿದರು. ಕಾಯಕ ಮತ್ತು ದಾಸೋಹವನ್ನು ಅರ್ಥಪೂರ್ಣವಾಗಿ ಅನುಷ್ಠಾನಗೊಳಿಸಿದರು. ಪ್ರತಿನಿತ್ಯ ಎರಡು ಹೊತ್ತು ದಾಸೋಹ ನಡೆದರೆ, ಪ್ರತಿ ಸೋಮವಾರ, ಹಬ್ಬ ಹರಿದಿನಗಳಲ್ಲಿ ವಿಶೇಷ ಕಾರ್ಯಕ್ರಮಗಳಿದ್ದಾಗ ವಿಶೇಷ ದಾಸೋಹದ ವ್ಯವಸ್ಥೆ ಮಾಡಿದರು. ದಾಸೋಹಕ್ಕಾಗಿಯೇ ಪ್ರತಿವರ್ಷ ೩ ಕೋಟಿ ರೂ.ಗಳಿಗೆ ಹೆಚ್ಚು ವೆಚ್ಚವಾಗುತ್ತದೆ. ಎಲ್ಲಾ ಖರ್ಚು ವೆಚ್ಚಗಳು, ಭಕ್ತರ ಸಹಕಾರ, ನೆರವು, ಮಠದ ಸಂಪನ್ಮೂಲಗಳ ಕ್ರೋಢೀಕರಣದಿಂದ ನಡೆಸಲಾಗುತ್ತಿದೆ.

ಮಠದ ಹೆಬ್ಬಾಗಿಲಿನಲ್ಲಿ ಬರೆದಿರುವ ಧ್ಯೇಯವಾಕ್ಯ **'ಸೋಹಂದೆನಿಸದೆ ದಾಸೋಹಿಯೆಂದೆನಿಸಯ್ಯ'** ಎಂಬುದು ಶ್ರೀಮಠವು ದಾಸೋಹಕ್ಕೆ ಕೊಡುತ್ತಿರುವ ಮಹತ್ವವನ್ನು ಸೂಚಿಸುತ್ತದೆ. ಶ್ರೀಮಠದ ಶಾಖಾ ಮಠಗಳು ಕಗ್ಗೆರೆ, ಡಂಬಳ, ಹಾವೇರಿ, ಚಿಕ್ಕಪಡಸಲಗಿ, ಶಿರೋಳ, ಅಣ್ಣಿಗೇರಿ, ರುದ್ನೂರು, ಮುಂಡರಗಿ ಮುಂತಾದ ಕಡೆಗಳಲ್ಲಿ ದಾಸೋಹ ನಡೆಯುವಂತೆ ಮಾಡಿದ್ದರು.

ಬಸವಣ್ಣನವರು ಹೇಳಿದಂತೆ ಮೂಢನಂಬಿಕೆ, ಕಂದಾಚಾರಗಳ ವಿರುದ್ಧ ಸಮರ ಸಾರಿದರು. ಒಂದು ಗ್ರಾಮಕ್ಕೆ ಶ್ರೀಗಳು ದಯಮಾಡಿಸಿದಾಗ ಅಡ್ಡಪಲ್ಲಕ್ಕಿಯಲ್ಲಿ ಕುಳಿತುಕೊಳ್ಳುವಂತೆ ಭಕ್ತರು ಒತ್ತಾಯಿಸಿದಾಗ ಭಕ್ತರ ಮನಸ್ಸಿಗೆ ನೋವಾಗದಂತೆ ನಯವಾಗಿ ನಿರಾಕರಿಸಿ ಮನುಷ್ಯರ ಮೇಲೆ ಮನುಷ್ಯರು ಕುಳಿತುಕೊಳ್ಳುವುದು ಅಕ್ಷಮ್ಯ ಅಪರಾಧ ಎಂದು ತಿಳಿಹೇಳಿದರು. ಪ್ರತಿವರ್ಷ ಫೆಬ್ರವರಿ ತಿಂಗಳಲ್ಲಿ ನಡೆಯುವ ತೋಂಟಾದಾರ್ಯ ಜಾತ್ರೆಯಲ್ಲಿ ರಥದ ನಾಲ್ಕು ಚಕ್ರಗಳಿಗೆ ಅನ್ನವಿಟ್ಟು ನಂತರ ತೇರನ್ನು ಎಳೆಯುವ ಪದ್ಧತಿಯಿತ್ತು. ಪೂಜ್ಯ ಶ್ರೀಗಳು ಪಟ್ಟಾಧಿಕಾರ ವಹಿಸಿಕೊಂಡ ವರ್ಷವೇ ಚಕ್ರಗಳಿಗೆ ಅನ್ನ ಹಾಕುವುದನ್ನು ನಿಲ್ಲಿಸಿದರು. ಅವರು ಅದಕ್ಕೆ ಕೊಟ್ಟ ಕಾರಣ – ನೂರಾರು ಜನರು ತಿನ್ನುವ ಅನ್ನವನ್ನು ನೆಲಕ್ಕೆ ಹಾಕಿ ತುಳಿದುಕೊಂಡು ರಥೋತ್ಸವ ಮಾಡಿದರೆ ಅರ್ಥವಿಲ್ಲ ಎಂಬುದನ್ನು ಭಕ್ತರಿಗೆ ಮನವರಿಕೆ ಮಾಡಿಕೊಟ್ಟರು. ಯಾವುದೇ ವಿಚಾರವಾಗಲಿ ಅದನ್ನು ವೈಚಾರಿಕತೆಯ ಹಿನ್ನೆಲೆಯಲ್ಲಿ ಚಿಂತನೆ ಮಾಡುತ್ತಿದ್ದರು.

ನಾಡಿನ ಹಿರಿಯ ವಿದ್ವಾಂಸರಾದ ಡಾ. ಗುರುಲಿಂಗ ಕಾಪಸೆಯವರು ಪೂಜ್ಯ ಶ್ರೀಗಳವರನ್ನು ಕುರಿತು ತಮ್ಮ



ಶ್ರೀ ಶ್ರೀಗಳವರೊಂದಿಗೆ ಮಾಜಿ ಮುಖ್ಯಮಂತ್ರಿ
ಶ್ರೀ ಎಸ್. ನಿಜಲಿಂಗಪ್ಪನವರು



ಶ್ರೀ ಶ್ರೀಗಳವರೊಂದಿಗೆ
ಶ್ರೀ ಅಟಲ್ ಬಿಹಾರಿ ವಾಜಪೇಯಿಯವರು
ಹಾಡು ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಅವರು

ನುಡಿನಮನದಲ್ಲಿ 'ಗದುಗಿನ ತೋಂಟದಾರ್ಯ ಮಠದ ಜಗದ್ಗುರು ಡಾ. ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತೊಟ್ಟ ಕಾವಿ ಬಟ್ಟೆ ಕನ್ನಡದ ಬಾಳ ಬಟ್ಟೆಯಾಗಿದೆ. ಅವರು ಹಿಡಿದ ಕೋಲಿನಲ್ಲಿ ಕನ್ನಡ ಕೆಚ್ಚದೆ, ಅವರು ಮಾತನಾಡುವ ನಾಲಿಗೆಯಲ್ಲಿ ಕನ್ನಡ ಸಾಹಿತ್ಯ, ಸಂಸ್ಕೃತಿಗಳ ರಸಗಟ್ಟಿಯಾಗಿದೆ. ಕಣ್ಣಲ್ಲಿ ಕನ್ನಡದ ಅಸಾಧಾರಣ ಹೊಳಪಿದೆ. ಅವರು ಇಡುವ ಪ್ರತಿಯೊಂದು ಹೆಜ್ಜೆಯಲ್ಲಿ ಧೀರೋದಾತ್ತ ಸ್ಪಂದನೆಯಿದೆ. ಅವರು ಚಿಂತನೆಯಲ್ಲಿ ಕನ್ನಡದ ಸಮಗ್ರ ನೆಲ-ಜಲಗಳ ಹಿರಿಮೆ ಗರಿಮೆಗಳಿವೆ. ಭೂತ, ವರ್ತಮಾನ, ಭವಿಷ್ಯತ್ತುಗಳ ಮಿಂಚಿನ ತರಂಗಗಳಿವೆ. ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ಕಾಯಕ ನಿಷ್ಠೆಯಿಂದ ಗದುಗಿನ ಮಠವು ಇಂದು ಕೇವಲ ಮಠವಾಗಿರದೇ ಒಂದು 'ಜನಸಾಮಾನ್ಯರ ವಿಶ್ವವಿದ್ಯಾಲಯದಂತೆ' ಇದೆ.







ಡಾ. ಕಾಪಸೆಯವರ ಒಂದೊಂದು ನುಡಿಗಳು ಪೂಜ್ಯರ ಕ್ರಿಯಾಶೀಲತೆಗೆ, ಸಾಧನೆಗೆ ಭಾಷ್ಯ ಬರೆದಂತಿದೆ.

**ಗೋಕಾಕ ಚಳವಳಿ :** ಕನ್ನಡದ ಜಗದ್ಗುರು ಎಂದೇ ಪ್ರಸಿದ್ಧರಾಗಿದ್ದ ಪೂಜ್ಯ ಶ್ರೀಗಳು ಅಖಿಲ ಕರ್ನಾಟಕ ಕೇಂದ್ರ ಕನ್ನಡ ಸಮಿತಿಯು ಗೋಕಾಕ ವರದಿ ಜಾರಿಗೆ ಬರಲಿ ಎಂದು ಹೋರಾಟ ನಡೆಸುವ ಮುನ್ನವೇ ಫೆಬ್ರವರಿ ೧೫, ೧೯೮೨ ರಂದು ಸಿಂಧಗಿಯಲ್ಲಿ ಗೋಕಾಕ ಚಳವಳಿ ಕುರಿತು ಕನ್ನಡ ಪ್ರಜ್ಞೆಯನ್ನು ಜಾಗೃತಿಗೊಳಿಸುವಂತಹ ಮಾತುಗಳನ್ನಾಡಿ ಕನ್ನಡಿಗರ ಸ್ವಾಭಿಮಾನ ಕೆರಳುವಂತೆ ಭಾಷಣ ಮಾಡಿದರು. 'ಗೋಕಾಕ ವರದಿ ಜಾರಿಗೆ ತರುವ ಸಲುವಾಗಿ ಹೋರಾಟಕ್ಕೆ ಸನ್ನದ್ಧರಾಗಿ, ನಿಮ್ಮ ನರನಾಡಿಗಳಲ್ಲಿ ಪೌರುಷವಿದ್ದರೆ ಕೂಡಲೇ ಸಿದ್ಧರಾಗಿ, ಕನ್ನಡಕ್ಕೆ ಅಗ್ರಪೂಜೆಯೆಂಬುದನ್ನು ಸಾಬೀತುಪಡಿಸಿ, ಜಾತಿ, ಮತ, ಪಂಥ ಬೇಧಗಳನ್ನು ಬದಿಗೊತ್ತಿ ಉಗ್ರ ಹೋರಾಟ ಪ್ರಾರಂಭಿಸಿ' ಎಂದು ಕರೆ ನೀಡಿದರು. ಈ ಭಾಷಣವು ಗೋಕಾಕ ಚಳವಳಿಗೆ ನಾಂದಿಯಾಯಿತು. ಶ್ರೀಗಳವರೇ ಮರುದಿನ ಬೀದಿಗಿಳಿದು ಪಾದಯಾತ್ರೆ ನಡೆಸಿದರು. ಸಿಂಧಗಿಯಲ್ಲಿ ಉಪವಾಸ ಸತ್ಯಾಗ್ರಹ ಮಾಡಿದರು. ಕನ್ನಡಕ್ಕಾಗಿ ಬೀದಿಗಿಳಿದ ಪ್ರಥಮ ಸ್ವಾಮೀಜಿ ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಪೂಜ್ಯ ಶ್ರೀಗಳು ಹಾಗೂ ಕನ್ನಡ ವರನಟ ಡಾ. ರಾಜ್‌ಕುಮಾರ್ ಅವರು ಗೋಕಾಕ ಚಳವಳಿಗೆ ಸ್ಫೂರ್ತಿಯ ಸೆಲೆ ಹಾಗೂ ಪ್ರೇರಕಶಕ್ತಿಯಾಗಿದ್ದರು. ಇವರ ಮುಂದಾಳತ್ವದಲ್ಲಿ ನಡೆದ ಚಳವಳಿ ಯಶಸ್ವಿಯಾಗಿ ಹಬ್ಬವನ್ನು ಆಚರಿಸುವಂತಾದುದು ಇತಿಹಾಸ!

ಜಗತ್ತಿನ ಪ್ರಬುದ್ಧ ಭಾಷೆಗಳಲ್ಲಿ ಒಂದಾಗಿರುವ ಎರಡು ಸಾವಿರ ವರ್ಷಗಳ ಸುದೀರ್ಘ ಇತಿಹಾಸವಿರುವ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ದೊರೆಯಬೇಕು ಎಂದು ಶ್ರೀಗಳು ಹೋರಾಟ ನಡೆಸಿದ್ದರು. ಉತ್ತರ ಕರ್ನಾಟಕದ ಬಂಡಾಯದ ನೆಲವೆಂದೇ ಪ್ರಸಿದ್ಧವಾದ ನರಗುಂದದಲ್ಲಿ ಜನವರಿ ೯, ೨೦೦೮ ರಂದು ನಾಡಿನ ಹಲವು ಮಠಾಧೀಶರೊಂದಿಗೆ ಪಾದಯಾತ್ರೆ ನಡೆಸಿ ಗಮನ ಸೆಳೆದಿದ್ದರು.

ಪೂಜ್ಯ ಶ್ರೀಗಳು ಗೋಕಾಕ ಚಳುವಳಿಗಷ್ಟೇ ತಮ್ಮ ನೇತೃತ್ವವನ್ನು ಸೀಮಿತಗೊಳಿಸಿದೆ ಡಾ. ಡಿ.ಎಂ. ನಂಜುಂಡಪ್ಪ ವರದಿ ಅನುಷ್ಠಾನ, ಪೋಸ್ಕೋ ವಿರೋಧಿ ಹೋರಾಟ, ಕಳಸಾ-ಬಂಡೂರಿ, ಮಹದಾಯಿ ಹೋರಾಟ, ಕಪ್ಪತಗುಡ್ಡ ರಕ್ಷಣೆ ಜೊತೆಗೆ ಲಿಂಗಾಯತ



ಶ್ರೀಗಳವರೊಂದಿಗೆ ಡಾ. ದ.ರಾ. ಬೇಂದ್ರೆಯವರು

ಸ್ವತಂತ್ರ ಧರ್ಮಕ್ಕಾಗಿ ಶ್ರೀ ತೋಂಟದ ಶ್ರೀಗಳು ಮುಂದಾಳತ್ವ ವಹಿಸಿ ಹೋರಾಟ ನಡೆಸಿದುದು ಐತಿಹಾಸಿಕ ದಾಖಲೆ. ಡಾ. ರಾಜ್‌ಕುಮಾರ್ ಅವರು ಪೂಜ್ಯರ ಕನ್ನಡ ನಾಡು, ನುಡಿಯ ಅಭಿಮಾನಕ್ಕೆ ಮಾರು ಹೋಗಿದ್ದರು.

**ಶಿಕ್ಷಣ ಕ್ಷೇತ್ರ :** ಪರಮಪೂಜ್ಯ ಶ್ರೀ ತೋಂಟದ ಶ್ರೀಗಳವರು ಶಿಕ್ಷಣ ಪ್ರೇಮಿಯಾಗಿದ್ದರು. ಗ್ರಾಮೀಣ ಪ್ರದೇಶದ ದೀನ-ದಲಿತರ, ಬಡ, ಹಿಂದುಳಿದ ವಿದ್ಯಾರ್ಥಿಗಳು ಶಿಕ್ಷಣದಿಂದ ವಂಚಿತರಾಗಬಾರದೆಂಬ ಆಶಯ, ಕಳಕಳಿ, ದೂರದೃಷ್ಟಿಯಿಂದ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದರು. ಶಿಕ್ಷಣ ಪಡೆಯುವವರು ಜ್ಞಾನಾರ್ಜನೆಗೆ ಮಾತ್ರ ಸೀಮಿತವಾಗದೆ, ಉದ್ಯೋಗ ಕಲ್ಪಿಸಿ ಕೊಡಲು ಸಹಾಯವಾಗಬೇಕು ಎಂಬ ಆಶಯದಿಂದ ಡಂಬಳದಲ್ಲಿ ೧೯೮೩ ರಲ್ಲಿ ವೃತ್ತಿ ತರಬೇತಿ ಕೇಂದ್ರವನ್ನು ಸ್ಥಾಪಿಸಿದರು. ಈ ಕೇಂದ್ರದಿಂದ ಶಿಕ್ಷಣ ಪಡೆದ ಬಹುತೇಕ ವಿದ್ಯಾರ್ಥಿಗಳಲ್ಲಿ ಕೆಲವರು ಸ್ವಯಂ ಉದ್ಯೋಗಿಗಳಾದರೆ, ಮತ್ತೆ ಕೆಲವರು ವಿವಿಧ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಾ ತಮ್ಮ ಭವಿಷ್ಯವನ್ನು ರೂಪಿಸಿಕೊಂಡಿದ್ದಾರೆ. ಪ್ರಾಥಮಿಕ

ಪೂರ್ವ ಶಿಕ್ಷಣದಿಂದ ಹಿಡಿದು ಸ್ನಾತಕೋತ್ತರ ಪದವಿಯವರೆಗೆ, ಡಿಪ್ಲೋಮ್, ಇಂಜಿನಿಯರಿಂಗ್, ವೈದ್ಯಕೀಯ ಶಿಕ್ಷಣದವರೆಗೆ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿದ್ದಾರೆ. ಈ ಸಂಸ್ಥೆಗಳಲ್ಲಿ ೨೫ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದಾರೆ. ಸಾವಿರಾರು ಜನರಿಗೆ ಉದ್ಯೋಗವನ್ನು ನೀಡಲಾಗಿದೆ.

ಶ್ರೀ ಜಗದ್ಗುರು ತೋಂಟದಾರ್ಯ ವಿದ್ಯಾಪೀಠದ ಸಾಧನೆಯನ್ನು ಗುರುತಿಸಿದ ಹಂಪಿ ಕನ್ನಡ ವಿಶ್ವವಿದ್ಯಾಲಯವು ಈ ಸಂಸ್ಥೆಯನ್ನು ಸಂಶೋಧನಾ ಕೇಂದ್ರವೆಂದು ಪರಿಗಣಿಸಿ ಮಾನ್ಯತೆ ನೀಡಿದೆ. ಈ ಸಂಸ್ಥೆಯಲ್ಲಿ ಅನೇಕ ವಿದ್ಯಾರ್ಥಿಗಳು ಸಂಶೋಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಪಿ.ಹೆಚ್.ಡಿ. ಪದವಿಯನ್ನು ಪಡೆದಿದ್ದಾರೆ.

**ಗ್ರಂಥಗಳ ಪ್ರಕಟಣೆ** : ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಶ್ರೀ ತೋಂಟದಾರ್ಯ ಮಠವನ್ನು ಶಿಕ್ಷಣ ಕೇಂದ್ರದ ಜೊತೆಗೆ ಅರಿವಿನ ಕೇಂದ್ರವನ್ನಾಗಿ ಮಾಡಬೇಕೆಂಬ ಸದುದ್ದೇಶದಿಂದ, ನಾಡಿನ ಹಿರಿಯ ವಿದ್ವಾಂಸರೂ, ಸಂಶೋಧಕರೂ ಆದ ಡಾ. ಎಂ.ವಿ. ಕಲಬುರ್ಗಿ ಅವರ ಸಹಕಾರ ಹಾಗೂ ಮಾರ್ಗದರ್ಶನದಿಂದ ೧೯೭೫ ರಲ್ಲಿ ಶ್ರೀಮಠದಲ್ಲಿ 'ಲಿಂಗಾಯತ ಅಧ್ಯಯನ ಸಂಸ್ಥೆ' ಪ್ರಾರಂಭಿಸಿದರು. ಈ ಸಂಸ್ಥೆ ಒಂದು ವಿಶ್ವವಿದ್ಯಾಲಯ ಮಾಡದಷ್ಟು ಸಾಧನೆಯನ್ನು ಮಾಡಿದೆ. ಕಳೆದ ೪೩ ವರ್ಷಗಳಿಂದ ೨೪೦ಕ್ಕೂ ಹೆಚ್ಚು ಮೌಲಿಕ ಗ್ರಂಥಗಳನ್ನು ಪ್ರಕಟಿಸಿದೆ. ಈ ಸಂಸ್ಥೆಯ ಸಾಧನೆಯನ್ನು ಗುರುತಿಸಿದ ಕರ್ನಾಟಕ ಸರ್ಕಾರದ ಕನ್ನಡ ಪುಸ್ತಕ ಪ್ರಾಧಿಕಾರವು ೨೦೧೦ನೇ ಸಾಲಿನ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ನೀಡಿ ಗೌರವಿಸಿರುವುದು ಲಿಂಗಾಯತ ಅಧ್ಯಯನ ಸಂಸ್ಥೆಯ ಹಿರಿಮೆಯನ್ನು ಸೂಚಿಸುತ್ತದೆ.

**ಭೂದಾನ** : ಎಷ್ಟು ಆಸ್ತಿಯಿದ್ದರೂ ತೃಪ್ತಿಪಡದೆ ಮತ್ತಷ್ಟು ಆಸ್ತಿಯನ್ನು ಗಳಿಸಬೇಕೆಂಬ ತುಡಿತವಿರುವ ಮಠಗಳಿಗೆ ಶ್ರೀ ತೋಂಟದಾರ್ಯ ಮಠ, ಆ ಮಠದ ಪೀಠಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಮಾದರಿಯಾಗಿರುತ್ತಾರೆ, ಆದರ್ಶವಾಗಿದ್ದಾರೆ. ತಮ್ಮ ಮಠಕ್ಕೆ ಸೇರಿದ ಭೂಮಿಯನ್ನು ಕೆ.ಎಲ್.ಇ. ಸಂಸ್ಥೆಯೂ ಸೇರಿದಂತೆ, ಉತ್ತರ ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿಯ ಗ್ರಾಮೀಣ ಪ್ರದೇಶಗಳ ಶೈಕ್ಷಣಿಕ, ಆಸ್ಪತ್ರೆ, ಸಮುದಾಯ ಕೇಂದ್ರಗಳು, ಸಂಘ ಸಂಸ್ಥೆಗಳನ್ನು ಸ್ಥಾಪಿಸಲು ಅಗತ್ಯವಾದ ಭೂಮಿಯನ್ನು ಉದಾರವಾಗಿ ದಾನಮಾಡಿದ ಕೀರ್ತಿ ಪರಮಪೂಜ್ಯರಿಗೆ ಸಲ್ಲುತ್ತದೆ. ಇಷ್ಟೇ ಅಲ್ಲದೆ ಕರ್ನಾಟಕ ಭೂಸುಧಾರಣೆ ಕಾಯ್ದೆ ಜಾರಿಗೆ ಬಂದ ಕೂಡಲೇ ಮೂರು ಸಾವಿರ ಎಕರೆ ಫಲವತ್ತಾದ ಭೂಮಿಯನ್ನು ರೈತರಿಗೆ ಬಿಟ್ಟುಕೊಟ್ಟಿರುವುದು ಅವರ ಹೃದಯ ವೈಶ್ಯಾಲತೆಗೆ, ರೈತರ ಬಗೆಗಿನ ಕಾಳಜಿಗೆ ನಿದರ್ಶನವಾಗಿದೆ. ಆ ಜಮೀನಿನಲ್ಲಿ ಕೃಷಿ ಕಾಯಕ ಮಾಡುವ ಅದೆಷ್ಟೋ ಕುಟುಂಬಗಳು ನೆಮ್ಮದಿಯಿಂದ ಜೀವನ ನಡೆಸುತ್ತಿದ್ದಾರೆ.

**ದೇವದಾಸಿ ವಿಮೋಚನೆ** : ಪರಮಪೂಜ್ಯ ಶ್ರೀಗಳವರು ತುಳಿತಕ್ಕೊಳಗಾಗಿ ಸಂಕಟಪಡುವವರಿಗೆ ನೆರವನ್ನು ನೀಡಿ ಸಮಾಜದಲ್ಲಿ ಸ್ವಾಭಿಮಾನದಿಂದ ಬದುಕುವಂತೆ ಮಾಡಿದ್ದಾರೆ. ವಿಜಾಪುರ ಜಿಲ್ಲೆಯ ಮೊರಟಗಿ ಮತ್ತು ಗುಲ್ಬರ್ಗ ಜಿಲ್ಲೆಯ ಸೊನ್ನ ಮತ್ತು ನೆಲೋಗಿಗಳಲ್ಲಿ ದೇವದಾಸಿ ಕುಟುಂಬಗಳು ಸಮಾಜದ ತುಳಿತಕ್ಕೆ ಒಳಗಾಗಿದ್ದವು. ವಿಚಾರವನ್ನು ತಿಳಿದ ಶ್ರೀಗಳು ದೇವದಾಸಿ ಕುಟುಂಬಗಳಿಗೆ ವಿಮೋಚನೆ ನೀಡಿ ಅಥಣಿಯಲ್ಲಿ ಪ್ರೇರಣಾಶಕ್ತಿ ಎಂಬ ಅನಾಥ ಆಶ್ರಮ ಸ್ಥಾಪಿಸಿ ದೇವದಾಸಿ ಕುಟುಂಬದ ಮಕ್ಕಳಿಗೆ ಶಿಕ್ಷಣ ಪಡೆಯಲು ಅಗತ್ಯವಾದ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟಿದ್ದಾರೆ. ಮುಂಡರಕಿ ತಾಲ್ಲೂಕಿನಲ್ಲಿರುವ ಡೋಣಿಲಂಬಾಣಿ ತಾಂಡಾವನ್ನು ದತ್ತು ತೆಗೆದುಕೊಂಡು ಅದರ ಸರ್ವ ತೋಮುಖ ಪ್ರಗತಿಗೆ ಕಾರಣರಾಗಿದ್ದಾರೆ. ಅನೇಕ ದಲಿತ ಸಂಘ ಸಂಸ್ಥೆಗಳ ಅಭಿವೃದ್ಧಿಗೆ ಆರ್ಥಿಕ ನೆರವು ನೀಡಿ ಆಶೀರ್ವದಿಸಿದ್ದಾರೆ. ನಿರ್ಗತಿಕ ರೋಗಿಗಳಿಗೆ ಉಚಿತ ವೈದ್ಯಕೀಯ ಸೌಲಭ್ಯ ಕಲ್ಪಿಸಿ ಕೊಟ್ಟು ಔದಾರ್ಯವನ್ನು ಮೆರೆದಿದ್ದಾರೆ.

ಬಸವಾದಿ ಶರಣರ ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದ ಶ್ರೀಗಳು ಶ್ರೀಮಠವನ್ನು ಸರ್ವಜನಾಂಗದ ಸುಂದರ ತೋಟವನ್ನಾಗಿ ಮಾಡಲು ಅನೇಕ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸಿದ್ದಾರೆ. ಬಸವಣ್ಣನವರು ಹೇಳಿದಂತೆ "ಇವನಾರವ ಇವನಾರವ ಎನ್ನದೆ ಇವ ನಮ್ಮವ ಇವ ನಮ್ಮವ" ಎಂದು ಎಲ್ಲಾ ವರ್ಗದವರನ್ನು ಪ್ರೀತಿಯಿಂದ, ಸಮಾನತೆಯಿಂದ ಕಂಡ ಮಹಾಮಾನವತಾವಾದಿಗಳು. ಕೋಮು ಸೌಹಾರ್ದತೆಯನ್ನು ಕುರಿತು ಶ್ರೀಗಳು ಹೇಳಿದ ಮಾತುಗಳು ಮನನೀಯವಾಗಿವೆ. "ಗ್ರಾಮೀಣ ಭಾರತದ ನರನಾಡಿ ಗಳಲ್ಲಿಯೇ ಸರ್ವಧರ್ಮ ಸಹಿಷ್ಣುಗುಣ ಸಹಜವಾಗಿಯೇ ಹರಿಯುತ್ತಿದೆ. ಎಲ್ಲರ ಮನಸ್ಸು ಒಂದಾಗಿ ಚೆಂದಾಗಿ ಬಾಳಬೇಕಾದರೆ ಮತೀಯ ವಿಷಯವನ್ನು ಹನಿಸುವ ಪೈಶಾಚಿಕ ಕೆಲಸ ನಿಲ್ಲಬೇಕು. ಈ ನಾಡು ಹಿಂಸೆಯಿಂದ ಮುಕ್ತವಾಗಬೇಕು. ಕ್ರೌರ್ಯದಿಂದ ದೂರವಾಗಬೇಕೆಂದು ಆಶಿಸೋಣ ಎಂದು ಕರೆ ನೀಡಿದರಲ್ಲದೆ, ಅದರಂತೆ ನಡೆದು ತೋರಿಸಿದರು. ಪೂಜ್ಯ ಶ್ರೀಗಳಿಗೆ ಅಂತರಂಗ-ಬಹಿರಂಗ ಬೇರೆಯಾಗಿರಲಿಲ್ಲ. ಎರಡರಲ್ಲೂ ಪರಿಶುದ್ಧತೆ ಯನ್ನು ಕಾಪಾಡಿಕೊಂಡು ಎಲ್ಲರ ಪ್ರೀತಿ ಗೌರವಕ್ಕೆ ಪಾತ್ರರಾಗಿದ್ದರು.

ದೀನ ದಲಿತರ, ಬಡವರ ಕಷ್ಟಗಳಿಗೆ ಕೂಡಲೇ ಸ್ಪಂದಿಸುತ್ತಿದ್ದರು. ಅವರ ಬಗ್ಗೆ ಕಳಕಳಿ, ಕಾಳಜಿಯನ್ನು ಹೊಂದಿದ್ದರು. ಸ್ವಾಮೀಜಿಯವರು ಒಂದು ದಿನ ಕಾರಿನಲ್ಲಿ ಹೋಗುತ್ತಿದ್ದಾಗ ದಾರಿಯಲ್ಲಿ ಹತ್ತಾರು ಜನ ಲಂಬಾಣಿ ಸಮುದಾಯದವರು ಕೂಲಿಗಾಗಿ ಸುಡು ಬಿಸಿಲಿನಲ್ಲಿ ಬರಿಗಾಲಿನಲ್ಲಿ ನಡೆದು ಹೋಗುತ್ತಿದ್ದುದನ್ನು ಕಂಡು ಹೃದಯ ಹಿಂಡಿದಂತಾಗಿ, ಸಮೀಪದಲ್ಲಿಯೇ ಇರುವ ನಗರಕ್ಕೆ ಹೋಗಿ ಚಪ್ಪಲಿಗಳನ್ನು ಕೊಂಡು ಲಂಬಾಣಿ ಸಮುದಾಯದವರನ್ನು ಭೇಟಿಯಾಗಿ ಅವರಿಗೆ ಚಪ್ಪಲಿಗಳನ್ನು ನೀಡಿದುದು ಅವರಲ್ಲಿನ ಮಾನವೀಯತೆಯ ದ್ಯೋತಕ.

**ಪ್ರಶಸ್ತಿಗಳು** : ಪರಮಪೂಜ್ಯರು ಸಮಾಜದ ಅಭಿವೃದ್ಧಿಗೆ ಸಲ್ಲಿಸಿದ ಅನುಪಮ ಸೇವೆಗಾಗಿ ಹಲವಾರು ಪ್ರತಿಷ್ಠಿತ ಪ್ರಶಸ್ತಿಗಳು ಅವರನ್ನು ಹುಡುಕಿಕೊಂಡು ಬಂದವು. ಶ್ರೀ ಅಟಲ್ ಬಿಹಾರಿ ವಾಜಪೇಯಿಯವರು ಪ್ರಧಾನ ಮಂತ್ರಿಗಳಾಗಿದ್ದಾಗ, ಭಾರತ ಸರ್ಕಾರವು ೨೦೦೧ ರಲ್ಲಿ ಕೋಮು ಸೌಹಾರ್ದತಾ ರಾಷ್ಟ್ರೀಯ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಕರ್ನಾಟಕ ಸರ್ಕಾರ ಕೊಡ ಮಾಡುವ ಪ್ರತಿಷ್ಠಿತ ಪ್ರಶಸ್ತಿಯಾದ ಬಸವ ರಾಷ್ಟ್ರೀಯ ಪುರಸ್ಕಾರ ಪ್ರಶಸ್ತಿಯನ್ನು ನೀಡಿ ೨೦೦೯ ರಲ್ಲಿ ಗೌರವಿಸಿತು. ಅಲ್ಲದೆ ಶ್ರೀ ಸಿದ್ಧಗಂಗಾ ಮಠವೂ ಸೇರಿದಂತೆ ಹಲವಾರು ಪ್ರತಿಷ್ಠಿತ ಮಠಗಳು, ಸಂಘ ಸಂಸ್ಥೆಗಳು, ಸನ್ಮಾನಿಸಿ ಗೌರವಿಸಿವೆ. ಪ್ರೀತಿ, ಗೌರವದಿಂದ ನೀಡಿದ ಪ್ರಶಸ್ತಿಯನ್ನು ಸೌಜನ್ಯದಿಂದ, ಕೃತಜ್ಞತೆಯಿಂದ ಸ್ವೀಕರಿಸುವುದರ ಮೂಲಕ ವಿನಯವಂತಿಕೆಯನ್ನು ಮೆರೆದರು.



**ಶ್ರೀಮಠದಲ್ಲಿ ಜಾತ್ರಾ ಮಹೋತ್ಸವ** : ಪ್ರತಿವರ್ಷ ಏಪ್ರಿಲ್ ತಿಂಗಳಲ್ಲಿ ನಡೆಯುವ ಜಗದ್ಗುರು ತೋಂಟದಾರ್ಯ ಜಾತ್ರಾ ಮಹೋತ್ಸವ, ನಾಲ್ಕು ದಿನಗಳ ಕಾಲ ವೈಶಿಷ್ಟ್ಯಪೂರ್ಣವಾಗಿ ನಡೆಯುತ್ತಿದೆ. ಹಲವಾರು ಕಾರ್ಯಕ್ರಮಗಳಿಂದ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ವಿದ್ವಾಂಸರಿಂದ ಉಪನ್ಯಾಸ, ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಸಾಧಕರಿಗೆ ಗೌರವ ಸಮರ್ಪಣೆ, ಗ್ರಂಥಗಳ ಲೋಕಾರ್ಪಣೆ, ವಚನ ಸಂಗೀತ ಗಾಯನ, ವೈದ್ಯಕೀಯ ತಪಾಸಣಾ ಶಿಬಿರ, ಕೃಷಿಮೇಳ, ಮಿಶ್ರತಳಿ ದನಗಳ ಪ್ರದರ್ಶನವೂ ಸೇರಿದಂತೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಗೊಳಿಸುತ್ತಾ ಬಂದಿದೆ.

**ಸಾಂಸ್ಕೃತಿಕ ಕಾರ್ಯಕ್ರಮ** : ಶ್ರೀಮಠ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳಿಗಷ್ಟೇ ಸೀಮಿತಗೊಳಿಸದೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸುವುದರ ಮೂಲಕ ಸ್ಥಳೀಯ ಕಲಾವಿದರೂ ಸೇರಿದಂತೆ ಪ್ರತಿಭಾವಂತ ಕಲಾವಿದರಿಗೆ ತಮ್ಮ ಪ್ರತಿಭೆಯನ್ನು ಅನಾವರಣಗೊಳಿಸಲು ಸೂಕ್ತ ವೇದಿಕೆಯನ್ನು ಕಲ್ಪಿಸಿಕೊಟ್ಟು ಪ್ರೋತ್ಸಾಹ ನೀಡುತ್ತಾ ಬಂದಿದ್ದು, ಡಾ. ಪಂಡಿತ ಮಲ್ಲಿಕಾರ್ಜುನ ಮನ್ಸೂರು, ಡಾ. ಪಂ. ಪುಟ್ಟರಾಜ ಗವಾಯಿಗಳು, ಎಂ. ವೆಂಕಟೇಶಕುಮಾರ ಮೊದಲಾದ ಪ್ರಸಿದ್ಧ ಕಲಾವಿದರಿಂದ ಕಾರ್ಯಕ್ರಮಗಳನ್ನು ಏರ್ಪಡಿಸಿ ಸಂಗೀತ ರಸದೌತಣ ಉಣಬಡಿಸಿದ್ದಾರೆ. ೧೯೯೩ ರಲ್ಲಿ ಕರ್ನಾಟಕ, ಆಂಧ್ರ ಪ್ರದೇಶ, ಮಧ್ಯಪ್ರದೇಶ, ಮಹಾರಾಷ್ಟ್ರ ರಾಜ್ಯದ ಜನಪದ ಕಲಾವಿದರನ್ನು ಶ್ರೀಮಠಕ್ಕೆ ಬರಮಾಡಿಕೊಂಡು 'ಲೋಕಕಲಾ ಯಾತ್ರಾ' ಎಂಬ ಅರ್ಥಪೂರ್ಣ ಕಾರ್ಯಕ್ರಮವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಯೋಗದಿಂದ ಯಶಸ್ವಿಯಾಗಿ ನಡೆಸಿ ಕಲಾವಿದರನ್ನು ಗೌರವಿಸಿದ್ದಾರೆ. ಇದು ಪೂಜ್ಯ ಶ್ರೀಗಳಿಗೆ ಕಲೆ, ಸಂಸ್ಕೃತಿ, ಕಲಾವಿದರ ಬಗ್ಗೆ ಇದ್ದ ಅಭಿಮಾನ, ಪ್ರೀತಿ, ಕಾಳಜಿಯನ್ನು ತೋರಿಸುತ್ತದೆ.

**ಶ್ರೀ ಸಿದ್ಧಗಂಗಾ ಮಠದೊಂದಿಗೆ :** ಪೂಜ್ಯ ಡಾ. ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರೊಂದಿಗೆ ಭಾವನಾತ್ಮಕವಾದ ಸಂಬಂಧವನ್ನು, ಭಕ್ತಿ ಗೌರವವನ್ನಿಟ್ಟುಕೊಂಡಿದ್ದರು. ಶ್ರೀಮಠದಲ್ಲಿ ನಡೆದ ಅನೇಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ನುಡಿನಮನಗಳನ್ನು ಸಲ್ಲಿಸಿದ್ದಾರೆ. ಮಾರ್ಚ್ ೩, ೧೯೯೭ ರಂದು ನಡೆದ ಪರಮಪೂಜ್ಯ ಶ್ರೀಗಳವರ ಪಟ್ಟಾಧಿಕಾರದ ವಜ್ರ ಮಹೋತ್ಸವ ಸಮಾರಂಭದಲ್ಲಿ ಏರ್ಪಡಿಸಿದ್ದ ಶಿವಾನುಭವ ಗೋಷ್ಠಿಯ ನೇತೃತ್ವವನ್ನು ವಹಿಸಿದ್ದರು. ಶಿವಾನುಭವ ಗೋಷ್ಠಿಯಲ್ಲಿ ಶ್ರೀಗಳು ತಮ್ಮ ನುಡಿನಮನದಲ್ಲಿ "ಪ್ರಾತಃಸ್ಮರಣೀಯರಾದ ಬಸವಾದಿ ಪ್ರಮಥ ಪರಂಪರೆಯನ್ನು ಬೆಳೆಸಿಕೊಂಡು ಬಂದಿರುವಂಥ ಸಿದ್ಧಗಂಗಾ ಮಠಾಧ್ಯಕ್ಷರು, ಸಮಕಾಲೀನ ದಿನಮಾನದ ಅಗ್ರಮಾನ್ಯ ವಿರಕ್ತಮೂರ್ತಿಗಳು, ತ್ರಿವಿಧ ದಾಸೋಹ ಮೂರ್ತಿಗಳು, ವಜ್ರ ಮಹೋತ್ಸವವನ್ನು ಆಚರಿಸಿ ಕೊಳ್ಳುತ್ತಿರುವಂಥ ಪೂಜನೀಯರಾದ ಪ್ರಣವಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಿಗೆ ಶರಣು ಶರಣಾರ್ಥಿಗಳನ್ನು ಹೇಳಿ, ಇದೊಂದು ಬಹಳ ಅಪೂರ್ವದ ಕಾರ್ಯಕ್ರಮವಾಗಿದ್ದು, ಇಲ್ಲಿ ಸೇರಿರುವ ಜನ, ಹಾಕಿರುವ ಪೆಂಡಾಲು, ಬಂದಿರುವಂಥ ರಾಷ್ಟ್ರಪತಿಗಳು, ಪ್ರಧಾನಮಂತ್ರಿಗಳು, ನಾಳೆ ಬರುವಂಥ ರಾಷ್ಟ್ರದ ರಾಜಕೀಯ ಗಣ್ಯರಾದ ಅಟಲ ಬಿಹಾರಿ ವಾಜಪೇಯಿ ಮೊದಲಾದವರು, ಇಲ್ಲಿ ಪ್ರಸಾದಕ್ಕಾಗಿ ಮಾಡಿರುವಂಥ ವ್ಯವಸ್ಥೆ, ಅಡುಗೆಗಾಗಿ ಸಂಗ್ರಹ ಮಾಡಿರುವಂಥ ದವಸ-ಧಾನ್ಯಗಳು, ಕಟ್ಟಿರುವಂಥ ಹಾಸ್ಟೆಲ್ ಹಾಗೂ ಸುಂದರವಾದ ದಾಸೋಹ ಮಂದಿರ ವನ್ನು ನೋಡಿ ಜನರಿಗೆ ಬಹಳ ಸಂತೋಷವಾಗಿದೆ. ಇದೊಂದು ಐತಿಹಾಸಿಕ ಕಾರ್ಯಕ್ರಮ, ಬಹಳ ಸಂತೋಷವಾಗಿ ಜರುಗುತ್ತಿದೆ.

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರದು ಮಾತು ಕಡಿಮೆ, ಕೃತಿ ಹೆಚ್ಚು ಮಾಡುತ್ತಾರೆ. ಶಿವಾನುಭವ ದಲ್ಲಿ ಬದುಕುತ್ತಾರೆ. ಆವಾಗ, ತಲೆ ಮೇಲೊಂದು ಬುಟ್ಟಿ ಹೂ ಹಾಕಿದರು, ಹಾರ ಹಾಕಿದರೂ ಅಷ್ಟೇ, ಹೂ ಹಾಕಿದರೂ ಅಷ್ಟೇ. ಈ ಜನುಮ ಎನ್ನುವುದು ಒಂದು ಜೀವಂತ ಪವಾಡ. ಪವಾಡ ಏನು ನಡೆಯುತ್ತದೆ, ಪವಾಡ ಎಲ್ಲಿದೆ ಎಂದು ಯಾರಾದರೂ ಕೇಳಿದರೆ ಸಿದ್ಧಗಂಗೆಗೆ ಬಂದು ದಿನಕ್ಕೆ ಹತ್ತು ಸಾವಿರದಷ್ಟು ಮಂದಿಗೆ ಊಟದ ವ್ಯವಸ್ಥೆ ನಡೆಯುತ್ತಿರುವುದನ್ನು ತೋರಿಸಬೇಕು. ಇದನ್ನು ಏಕೆ ಹೇಳುತ್ತಿದ್ದೇನೆಂದರೆ, ಅವರು ಮಾಡುತ್ತಾರೆಂದು ನಾವು ನಂಬಬೇಕು, ಹೇಳಿದರೆ ನಂಬುವುದಕ್ಕಾಗುವುದಿಲ್ಲ. ಹತ್ತು ಸಾವಿರ ಮಂದಿಯೆಂದರೆ ಇಡೀ ಒಂದು ಊರಾಯಿತು. ಮುಂಜಾನೆ ಹತ್ತು ಸಾವಿರ ಮಂದಿಗೆ ಊಟ, ಏನು ಕಥೆ ಇದು ? ಇದು ನಂಬುವುದಕ್ಕಾ ಗುವುದಿಲ್ಲ. ಆದರೂ ಇದನ್ನು ನಂಬಬೇಕು. ಏಕೆಂದರೆ ಮಾಡುತ್ತಾರೆ. ಅದಕ್ಕಾಗಿ ನಾವು ನಂಬಬೇಕಾಗಿದೆ. ಮಹಾತ್ಮ ಗಾಂಧೀಜಿ ಬಗ್ಗೆ ಐನ್‌ಸ್ಟೀನ್ ಹೇಳುತ್ತಾನೆ : 'ಬರೀ ಒಂದು ಮುಂಡ, ಧೋತರಾ, ಶಲ್ಯ ಉಟ್ಟುಕೊಂಡು ಮದ್ದುಗುಂಡು ಗಳಿಲ್ಲದೆ ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಗಾಂಧಿ ಎಂದರೆ ಮುಂಬರುವ ಜನಾಂಗ ನಂಬುವುದಿಲ್ಲ, ಇದು



ಪರಮಪೂಜ್ಯ ಡಾ. ಶ್ರೀ ಶ್ರೀ ತೋಂಟದ ಮಹಾಸ್ವಾಮಿಗಳವರಿಂದ ನುಡಿನಮನ



ಗಾಂಧೀಜಿ ಮಾಡಿದ ಪವಾಡ. ಅದಕ್ಕೋಸ್ಕರ ನೀವು ಗಾಂಧೀಜಿಯವರ ಆಚರಣೆಯನ್ನು ಜಾರಿಗೆ ತರಬೇಕು, ಜನರು ನಂಬಬೇಕಾದರೆ, ಭಾರತವನ್ನು ಮೇಲೆತ್ತ ಬೇಕಾದರೆ ಗಾಂಧೀಜಿಯವರ ಆಚರಣೆಯನ್ನು ಜಾರಿಗೆ ತನ್ನಿರೆಂದರು. ಹಾಗೆಯೇ, ಸಿದ್ಧಗಂಗಾ ಮಹಾಸ್ವಾಮಿಗಳು ಮುಂಜಾನೆ ಹತ್ತು ಸಾವಿರ, ಸಂಜೆ ಹತ್ತು ಸಾವಿರ, ಒಟ್ಟು ದಿವಸಕ್ಕೆ ಇಪ್ಪತ್ತು ಸಾವಿರ ಜನರಿಗೆ ಊಟ ಹಾಕುತ್ತಾರೆ. ಇದು ಎಂತಹುದು? ಒಬ್ಬ ಹಳ್ಳಿಯ ಹೆಣ್ಣುಮಗಳು ಹೇಳುತ್ತಾಳೆ. 'ಕೈಲಾಸ, ಕೈಲಾಸವೆಂದರೇನು? ಇದೇ ಕೈಲಾಸ, ಇಲ್ಲಿರುವ ಊಟದ ಮನೆ, ಅಡುಗೆ, ಪ್ರಸಾದ ನಿಲಯದ ಭವನ, ಮೂರು ಸಾವಿರ ಮಂದಿ ಊಟಕ್ಕೆ ಕೂರುವ ಭವನವನ್ನು ನೋಡಿದರೆ, ಕಾರಂಜಿ, ಕೆಳಗೆ ಹಾಕಿರುವ ಗ್ರಾನೈಟ್‌ಶಿಲೆ, ಇಲ್ಲಿ ತಿರುಗಾಡುವುದೇ ಒಂದು ಸಂತೋಷವೆನಿಸುತ್ತದಾದ್ದರಿಂದ ಇದೇ ಕೈಲಾಸ ವೆನ್ನುತ್ತಾಳೆ.' ಪೂಜ್ಯ ಮಹಾಸ್ವಾಮಿಗಳವರ ಒಂದು ಬದುಕು, ಅದು ನಮ್ಮ ದಿನಮಾನದ ದೊಡ್ಡಪುಣ್ಯ, ಒಂದು ಭಾಗ್ಯ. ಕರ್ನಾಟಕಕ್ಕೆ ಇಡೀ ದೇಶದಲ್ಲಿ ಎಲ್ಲಿಲ್ಲದ ದೊಡ್ಡ ಗೌರವಸ್ಥಾನ, ಗುರುಸ್ಥಾನ ಇದಾಗಿದೆ. ಇಂತಹ ಪೂಜ್ಯ ಮಹಾಸ್ವಾಮಿಗಳವರ ಸಾಧನೆ ಸಿದ್ಧಿ ತಪಸ್ಸು ಕಾರಣ ವಾಗಿದೆ. ಆ ಹಿನ್ನೆಲೆಯಲ್ಲಿ ಅವರು ಇನ್ನೂ ದೀರ್ಘಾ ಆಯುಷ್ಯಮಾನರಾಗಲಿ, ಇಂತಹ ರಚನಾತ್ಮಕ ಕೆಲಸಗಳು ಈ ಭಾಗದಲ್ಲಿ ಹೆಚ್ಚು ನಡೆಯುವ ಮೂಲಕ ಇಡೀ ದೇಶದ ಧರ್ಮಕ್ಕೆ ಒಂದು ಶಕ್ತಿ, ಸತ್ತ್ವವನ್ನು ತುಂಬಲಿ." ಶ್ರೀಗಳ ಒಂದೊಂದು ನುಡಿಗಳು ಪೂಜ್ಯ ಶ್ರೀಗಳವರ ಸಾಧನೆಯ ಮೇರು ಸದೃಶ ವ್ಯಕ್ತಿತ್ವವನ್ನು ಅನಾವರಣಗೊಳಿಸುತ್ತದೆ.

ಏಪ್ರಿಲ್ ೮ ಮತ್ತು ೯, ೨೦೦೭ ರಂದು ನಡೆದ ಪರಮಪೂಜ್ಯ ಶ್ರೀಗಳವರ ೧೦೦ನೇ ಜನ್ಮದಿನೋತ್ಸವ ಸಮಾರಂಭದಲ್ಲಿ ಭಾಗವಹಿಸಿದ್ದ ಡಾ. ಶ್ರೀ ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳು ತಮ್ಮ ನುಡಿನಮನದಲ್ಲಿ "ವಿಶ್ವದ ಅದ್ಭುತಗಳಲ್ಲಿ ಒನೆಯದ್ದು ಯಾವುದು ಎಂದರೆ 'ಸಿದ್ಧಗಂಗಾ ಶ್ರೀಗಳು'. ಹತ್ತು ಸಾವಿರ ಮಕ್ಕಳಿಗೆ ಅನ್ನ, ವಿದ್ಯೆ, ಸಂಸ್ಕಾರ ಜ್ಞಾನವನ್ನು ನೀಡುತ್ತಿರುವ ಜಗತ್ತಿನ ಏಕೈಕ ಮಠ ಎಂದರೆ ಸಿದ್ಧಗಂಗಾ ಮಠ. ನಾವೆಲ್ಲ ಉಪ್ಪಿನಂತೆ, ಮಂಜುಗಡ್ಡೆಯಂತೆ ಕರಗಿ ಹೋಗಿ ಬಿಡುತ್ತೇವೆ. ಆದರೆ ಸ್ವಾತಿ ಮುತ್ತಿನಂತವರು ಅವರ ಜನಮಾನಸದಲ್ಲಿ ಸದಾ ಹಚ್ಚ ಹಸಿರಾಗಿರುತ್ತಾರೆ. ವಿರಕ್ತ ಪರಂಪರೆಯಲ್ಲಿ ಬಡವ ಮತ್ತು ಶ್ರೀಮಂತ ಎಂಬ ಗದ್ದಲದಲ್ಲಿ, ಬಡವರಿಗೆ ವಿದ್ಯೆ, ಅನ್ನವನ್ನು ನೀಡುತ್ತಾ ಸ್ಥಿತಪ್ರಜ್ಞರಾಗಿ ಸಮಾಜ ಸೇವೆಯನ್ನು ಸಲ್ಲಿಸುತ್ತಿರುವ ಶ್ರೀಗಳು ಶ್ರೀ ಉದ್ದಾನ ಶಿವಯೋಗಿಗಳ ಆಶಯ ಮತ್ತು ಪರಂಪರೆಗೆ ಧಕ್ಕೆ ತರದಂತೆ ನಡೆದುಕೊಂಡಿದ್ದಾರೆ. ಸಮಾಜದಲ್ಲಿ ಸ್ವಾಮಿಗಳಾದವರು ಸದಾ ವಸಂತ ಕಾಲದಂತಿರಬೇಕು, ತಂಗಾಳಿಯಂತಿರಬೇಕು, ಇಲ್ಲಿ ಲಕ್ಷಾಂತರ ಜನ ಜಾತ್ರೆ ಸೇರಿರುವುದನ್ನು ನೋಡಿದರೆ ಶ್ರೀಗಳವರು ಸಲ್ಲಿಸುತ್ತಿರುವ ಅನನ್ಯ ಸೇವೆ ಮತ್ತು ಜನಪ್ರಿಯತೆ ಏನೆಂದು ತೋರುತ್ತದೆ" ಎಂದು ಮುಕ್ತಕಂಠದಿಂದ ನುಡಿ ನಮನ ಸಲ್ಲಿಸಿದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಯಸುತ್ತೇನೆ.

**ಲಿಂಗೈಕ್ಯ :** ೬೯ ವಸಂತಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದು ಸಮಾಜದ ಅಭಿವೃದ್ಧಿಗೆ ತಮ್ಮನ್ನು ಅರ್ಪಣಾಭಾವದಿಂದ ಸಮರ್ಪಿಸಿಕೊಂಡಿದ್ದ ಪೂಜ್ಯ ಶ್ರೀಗಳು ೭೦ನೇ ವಸಂತವನ್ನು ಸ್ವಾಗತಿಸುವ ಸಂಭ್ರಮ ದಲ್ಲಿರುವಾಗಲೇ ಲೋಕದೊಡೆಯ ಪರಶಿವ ಅಕ್ಟೋಬರ್ ೨೦, ೨೦೧೮ ರಂದು ತನಗೆ ಬೇಕೆಂದು ಕರೆದುಕೊಂಡ. ಅವರು ಇದ್ದಷ್ಟು ಕಾಲ ಒಂದೊಂದು ನಿಮಿಷವನ್ನು ಬಡವರ, ದೀನ ದಲಿತರ ಪ್ರಗತಿಗಾಗಿ ಸೇವೆ ಸಲ್ಲಿಸಿದ ದಾರ್ಶನಿಕರು. ಶ್ರೀ ತೋಂಟದಾರ್ಯ ಮಠವನ್ನು ತಮ್ಮ ಅಧಿಕಾರಾವಧಿಯಲ್ಲಿ ಬೆರಗಾಗುವಂತೆ ಅಭಿವೃದ್ಧಿ ಪಡಿಸಿದರು.

ಪೂಜ್ಯ ಡಾ. ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿ ಗಳವರು ಲಿಂಗದೊಳಗೊಂದಾದುದು ಸಮಾಜಕ್ಕೆ ಭರಿಸಲಾಗದ ನಷ್ಟ. ಅವರ ಮಾರ್ಗದರ್ಶನ ಸಮಾಜಕ್ಕೆ ಇನ್ನೂ ಬಹಳಷ್ಟು ಕಾಲ ಬೇಕಾಗಿತ್ತು.

ಅವರ ಅಂತಿಮ ದರ್ಶನವನ್ನು ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಆದಿಚುಂಚನಗಿರಿ ಮಠಾಧ್ಯಕ್ಷರಾದ ಪೂಜ್ಯ ಡಾ. ಶ್ರೀ ಶ್ರೀ ನಿರ್ಮಲಾನಂದನಾಥ ಸ್ವಾಮೀಜಿಗಳು ಸೇರಿದಂತೆ ವಿವಿಧ ಮಠಗಳ ೨೦೦ಕ್ಕೂ ಹೆಚ್ಚು ಹರಗುರು ಚರಮೂರ್ತಿಗಳು ಪಡೆದರು. ಲಕ್ಷಾಂತರ ಜನ ಭಕ್ತರು, ಅಭಿಮಾನಿಗಳ ನಡುವೆ ಅಂತಿಮ ಸಂಸ್ಕಾರದ ವಿಧಿವಿಧಾನಗಳು ನಡೆದರೆ, ಸರ್ಕಾರದಿಂದ ಗೌರವ ರಕ್ಷೆ ನೀಡಲಾಯಿತು.

ಪರಮಪೂಜ್ಯ ಶ್ರೀಗಳವರ ಆತ್ಮಕ್ಕೆ ಚಿರಶಾಂತಿ ಯನ್ನು ಸಿದ್ಧಗಂಗಾ ಗುರು ಪರಂಪರೆ ನೀಡಲೆಂದು ಸಿದ್ಧಗಂಗಾ ಶ್ರದ್ಧೆಯನ್ನು ಅರ್ಪಿಸುತ್ತದೆ.







ಶರಣಾಂಜಲಿ

# ಶ್ರೀ ವಿ.ಪಿ. ಗಂಗಣ್ಣನವರು



ಶ್ರೀಮಠದ ಹಳೆಯ ವಿದ್ಯಾರ್ಥಿ ಶ್ರೀ ವಿ.ಪಿ. ಗಂಗಣ್ಣನವರು ಅಕ್ಟೋಬರ್ ೧೯, ೨೦೧೮ ರಂದು ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ.

ಶ್ರೀಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪರಮಭಕ್ತರಾಗಿದ್ದ ಶ್ರೀ ವಿ.ಪಿ. ಗಂಗಣ್ಣನವರು ಶ್ರೀಮಠಲ್ಲಿ ಪೂಜ್ಯರ ದಿವ್ಯಾನುಗ್ರಹದಿಂದ ವ್ಯಾಸಂಗ ಮಾಡಿ ತಮ್ಮ ಭವಿಷ್ಯವನ್ನು ರೂಪಿಸಿಕೊಂಡ ಸುಸಂಸ್ಕೃತರು. ಪೂಜ್ಯ ಶ್ರೀಗಳವರನ್ನು ಕುರಿತು ಮಾತನಾಡುವಾಗ ಭಾವಪರವಶರಾಗುತ್ತಿದ್ದರು. 'ಪರಮಪೂಜ್ಯ ಶ್ರೀ ಶ್ರೀಗಳವರ ಸಮಕಾಲೀನರಾಗಿ ಬದುಕಿರುವುದೇ ದೊಡ್ಡ ಪ್ರಶಸ್ತಿ. ಅವರ ಆಶೀರ್ವಾದದ ನೆರಳಿನಲ್ಲಿ ತಂಪಾಗಿ ಬಾಳುತ್ತಿದ್ದೇವೆ ಎಂಬುದಕ್ಕಿಂತ ದೊಡ್ಡ ಆಸ್ತಿ ಯಾವುದಿದೆ' ಎಂದು ಕೃತಜ್ಞತೆಯಿಂದ ಸ್ಮರಿಸುತ್ತಿದ್ದರು. ಶ್ರೀಮಠದ ಕಾರ್ಯಕ್ರಮಗಳಲ್ಲಿ ಭಾಗವಹಿಸುವಲ್ಲಿ ಸಂತೋಷ, ಧನ್ಯತೆಯನ್ನು ಹೊಂದುತ್ತಿದ್ದರು.

ಶ್ರೀಯುತ ವಿ.ಪಿ. ಗಂಗಣ್ಣನವರು ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕು ವಿರುಪಾಕ್ಷಿಪುರದಲ್ಲಿ ದಿನಾಂಕ ೨೦-೦೧-೧೯೩೭ರಲ್ಲಿ ಶರಣ ಫಲಾರದಯ್ಯ ಶರಣೆ ಶ್ರೀಮತಿ ರಾಮಕ್ಕ ಎಂಬ ಪುಣ್ಯ ದಂಪತಿಗಳ ಸುಪುತ್ರರಾಗಿ ಜನಿಸಿದರು. ಇವರ ಪ್ರಾಥಮಿಕ ವಿದ್ಯಾಭ್ಯಾಸವನ್ನು ಅದಲಗೆರೆಯಲ್ಲಿ, ಪರಮಪೂಜ್ಯ ಶ್ರೀ ಶ್ರೀಗಳವರ ಅನುಗ್ರಹದಿಂದ ಶ್ರೀ ಸಿದ್ಧಗಂಗಾ ಮಠದಲ್ಲಿ ಅಶನ ವಸತಿಯನ್ನು ಪಡೆದು, ಸಿದ್ಧಗಂಗಾ ಮಠದ ಪ್ರೌಢಶಾಲೆಯಲ್ಲಿ ಮತ್ತು ಒಂದು ವರ್ಷಗಳ ಕಾಲ ಬೆಂಗಳೂರಿನ ಮಲ್ಲೇಶ್ವರಂ ಪ್ರೌಢಶಾಲೆಯಲ್ಲಿ ಮುಗಿಸಿ ಪಿ.ಯು.ಸಿ. ಮತ್ತು ಬಿ.ಎಸ್ಸಿ ಪದವಿಯನ್ನು ತುಮಕೂರು ಸರ್ಕಾರಿ ಕಾಲೇಜಿನಲ್ಲಿ ಮುಗಿಸಿದರು. ವಿದ್ಯಾಭ್ಯಾಸ ಮುಗಿಸಿದ ಮೇಲೆ ಕೆಲವು ವರ್ಷಗಳ ಕಾಲ ಗುಬ್ಬಿ ತಾಲ್ಲೂಕು ಅಂಕನಹಳ್ಳಿ ಪ್ರೌಢಶಾಲೆಯಲ್ಲಿ ತಾತ್ಕಾಲಿಕ ಉಪಾಧ್ಯಾಯರಾಗಿ ಸೇವೆ ಸಲ್ಲಿಸಿ ಬಿ.ಇಡಿ ತರಬೇತಿಯನ್ನು ಮೈಸೂರಿನ ಮರಿಮಲ್ಲಪ್ಪ ಸರ್ಕಾರಿ ಶಿಕ್ಷಕರ ಕಾಲೇಜಿನಲ್ಲಿ ಮುಗಿಸಿದರು. ನಂತರ ಹಲವಾರು ಕೈಗಾರಿಕಾ ಸಹಕಾರ ಸಂಸ್ಥೆಗಳಲ್ಲಿ ಹಾಗೂ ಹಾಲು ಉತ್ಪಾದಕರ ಸಂಘಗಳಲ್ಲಿ ಮೇಲ್ವಿಚಾರಕರಾಗಿ, ಸಹಕಾರ ನಿಬಂಧಕರಾಗಿ, ಕಾರ್ಯದರ್ಶಿಯಾಗಿ, ಆಡಳಿತಾಧಿಕಾರಿಯಾಗಿ ಹಾಗೂ ಲೆಕ್ಕಾಧಿಕಾರಿಯಾಗಿ ಪ್ರಾಮಾಣಿಕವಾಗಿ ಸೇವೆ ಸಲ್ಲಿಸಿ ಅಧಿಕಾರಿಗಳ ಪ್ರೀತಿಗೆ ಪಾತ್ರರಾಗಿ ೧೯೯೫ರಲ್ಲಿ ನಿವೃತ್ತಿ ಹೊಂದಿದ್ದರು.



ನಿವೃತ್ತಿಯ ನಂತರ ವಿಶ್ರಾಂತಿ ಪಡೆಯದೆ ತುಮಕೂರಿನ ಸಿದ್ಧರಾಮೇಶ್ವರ ಸಹಕಾರ ಬ್ಯಾಂಕಿನಲ್ಲಿ ನಿರ್ದೇಶಕರಾಗಿ ಉಪಾಧ್ಯಕ್ಷರಾಗಿ, ತುಮಕೂರಿನ ಕೈಗಾರಿಕಾ ಸಂಘದಲ್ಲಿ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ಶ್ರೀಮಠದಲ್ಲಿ ಸುಮಾರು ೬ ವರ್ಷಗಳ ಕಾಲ ಹಳೆಯ ವಿದ್ಯಾರ್ಥಿಯಾಗಿ ಶ್ರೀಗಳವರ ಅನುಗ್ರಹಕ್ಕೆ ಪಾತ್ರರಾಗಿ ಶ್ರೀಗಳು ನನಗೆ ಅಶನವಸತಿಗಳನ್ನು ನೀಡಿ ಆಶೀರ್ವದಿಸಿದ್ದಾರೆ. ಪೂಜ್ಯ ಶ್ರೀಗಳ ಅನುಗ್ರಹದಿಂದ ಸಮಾಜದಲ್ಲಿ ಒಬ್ಬ ಉತ್ತಮ ವ್ಯಕ್ತಿಯಾಗಿ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಆಶೀರ್ವದಿಸಿದ್ದಾರೆ. ಶ್ರೀಮಠದಲ್ಲಿ ನನಗೆ ಆಶ್ರಯ ನೀಡದಿದ್ದರೆ ಒಬ್ಬ ಸುಸಂಸ್ಕೃತ ವ್ಯಕ್ತಿಯಾಗಿ ಸೇವೆ ಸಲ್ಲಿಸಲು ಸಾಧ್ಯವಾಗುತ್ತಿರಲಿಲ್ಲ ಎಂದು ಹೃದಯ ತುಂಬಿ ಹೇಳುತ್ತಿದ್ದರು. ಸೇವೆಯಲ್ಲಿದ್ದಾಗ ಸಿದ್ಧಗಂಗಾ ಮಾಸಪತ್ರಿಕೆಗೆ ಹಲವರನ್ನು ಆಜೀವ ಸದಸ್ಯರನ್ನಾಗಿ ಮಾಡಿ ಪತ್ರಿಕೆ ಮುನ್ನಡೆಯಲು ಸಹಕಾರ ನೀಡಿದ್ದರು. ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ಆರ್ಥಿಕ ನೆರವು ನೀಡಿದ್ದಾರೆ. ಕೈಗಾರಿಕಾ ಸಹಕಾರ ಸಂಘದಿಂದ ಹಣ ಕೊಡಿಸಿದ್ದಾರೆ. ಪ್ರತಿತಿಂಗಳು ಅವರ ಧರ್ಮಪತ್ನಿ ಶ್ರೀಮತಿ ಮಂಗಳಗೌರಮ್ಮ ಇವರ ಸ್ಮರಣಾರ್ಥ ಹಣವನ್ನು ಮಠದ ದಾಸೋಹಕ್ಕೆ ನೀಡುತ್ತಿದ್ದರು. ಶ್ರೀ ವಿ.ಪಿ. ಗಂಗಣ್ಣನವರಿಗೆ ಮುತ್ತಿನಂತ ಮೂರು ಮಕ್ಕಳು. ಡಾ. ಶೋಭಾ, ಡಾ. ಪ್ರಭುಶಂಕರ್, ಡಾ. ಸುರೇಶ್ ಇವರೆಲ್ಲ ಉತ್ತಮ ಉದ್ಯೋಗದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀಯುತರಿಗೆ ಸಿದ್ಧಗಂಗೆಯ ಸಿದ್ಧಪುರುಷ, ತ್ರಿವಿಧ ದಾಸೋಹಮೂರ್ತಿ, ಪದ್ಮಭೂಷಣ, ಕಾಯಕಯೋಗಿ, ಕರ್ನಾಟಕರತ್ನ, ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕಾರುಣ್ಯ ಕಮ್ಮಟದಲ್ಲಿ ರೂಪುಗೊಂಡ ಶ್ರೀಮಠದ ಹಳೆಯ ವಿದ್ಯಾರ್ಥಿ ಶ್ರೀ ವಿ.ಪಿ. ಗಂಗಣ್ಣನವರಿಗೆ ಸಾಮಾಜಿಕ ಕ್ಷೇತ್ರದಲ್ಲಿ ಸಲ್ಲಿಸಿರುವ ಅನುಪಮ ಸೇವೆಯನ್ನು ಗುರುತಿಸಿ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ೬೩ನೆಯ ಮಹಾಧಿವೇಶನದಲ್ಲಿ 'ಸಂಘಸಿರಿ' ಪ್ರಶಸ್ತಿಯನ್ನಿತ್ತು ಗೌರವಿಸಿದುದನ್ನು ಈ ಸಂದರ್ಭದಲ್ಲಿ ಸ್ಮರಿಸ ಬಯಸುತ್ತದೆ.

ಶ್ರೀಯುತರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಕುಟುಂಬ ವರ್ಗದವರಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.







ಲೇಖನ

# ಬಸವಣ್ಣನವರು ರೂಪಿಸಿದ ಸಮಾಜ

- ಡಾ. ಗೊ.ರು. ಚನ್ನಬಸಪ್ಪ *

ಮನಸ್ಸಿಗೆ ಬಂದ ಬಯಕೆ, ಬಯಕೆಗೆ ತಕ್ಕ ಪೂರೈಕೆ, ಬೇಡಿದ್ದನ್ನು ನೀಡುವ ಕಲ್ಪತರು-ಕಾಮಧೇನು, ಕಣ್ಣೀರು-ಬೆವರುಗಳಿಲ್ಲದ ಆನಂದ, ಅಪರಿಮಿತವಾದ ಆಯುಸ್ಸು, ತಿಂದು ತೇಗುವಷ್ಟು ಭಕ್ಷ್ಯ ಭೋಜ್ಯ, ಕುಡಿದು ಮರೆಯು ವಷ್ಟು ಸುರಾಪಾನ, ಅಪ್ಪಿ ಭೋಗಿಸುವಷ್ಟು ಅಪ್ಸರೆಯರು, ಹೊತ್ತಿನ ಗೊತ್ತಿಲ್ಲ ಕತ್ತಲೆಯ ಕಾಟವಿಲ್ಲ, ರೋಗವಿಲ್ಲದ ಯೋಗ, ಸೋಲಿಲ್ಲದ ಭೋಗ, ಅಲ್ಲಿ ಸೂರ್ಯ ತಂಪು, ಚಂದ್ರ ಬೆಚ್ಚಗೆ - ಹೀಗೆ ಸ್ವರ್ಗಸುಖದ ಬಗ್ಗೆ ಏನೇನೋ ವರ್ಣಿಸಿದರು ನಮ್ಮ ಪೌರಾಣಿಕರು. ಎಂದಿನಿಂದಲೂ ಸುಖಾಪೇಕ್ಷಿಯಾದ ಮಾನವನನ್ನು ಕೇಳಬೇಕೇ? ಈ ವರ್ಣನೆಯನ್ನು ಕೇಳಿ ಹುಚ್ಚನಾದ.

ಆದರೆ ಅದೆಲ್ಲ ಸತ್ತನಂತರ ದೊರೆಯುವ ಸುಖವಾಗಿತ್ತು. ಸಾಯುವವರೆಗೆ ಕಾಯುವುದಾದರೂ ಹೇಗೆ? ಅಥವಾ ಆ ಸ್ವರ್ಗಸುಖದ ಆಸೆಗಾಗಿ ಬೇಗೆ ಸಾಯುವುದೇ? ಬಹಳ ಯೋಚನೆ ಮಾಡಿದ ಮಾನವ. ಬುದ್ಧಿ ಜೀವಿಯಲ್ಲವೇ ಅವನು? ಸತ್ತನಂತರ ಸಿಗಬಹುದಾದ ಸ್ವರ್ಗವನ್ನು ಭೂಮಿಯ ಮೇಲೆ ಅನುಭವಿಸಲಾರದೇಕೆ ಎಂದು ಅವನಿಗನಿಸಿತು. ಅಂತೆ ಯಾವ ನೋವೂ ಇಲ್ಲದ, ಯಾವ ದುಃಖವೂ ಇಲ್ಲದ ಹರ್ಷೋದ್ಯಾನವನ್ನು ಇಲ್ಲೇ ಸೃಷ್ಟಿಸಲೆತ್ನಿಸಿದ.

ನಮಗೆಲ್ಲ ತಿಳಿದಂತೆ ಆದಿ ಮಾನವನ ಜೀವನ ಬೆತ್ತಲೆ ಮತ್ತು ಕೊರತೆಗಳ ಆಗರ. ತನ್ನ ಉಳಿವಿಕೆಗಾಗಿ, ಆ ಕೊರತೆಯ ಪೂರೈಕೆಗಾಗಿ ಪ್ರಚಂಡ ಹೋರಾಟ ನಡೆಸುತ್ತಲೇ ಭೂಮಿಯ ಮೇಲೆ ತನ್ನ ಬದುಕನ್ನು ಆರಂಭಿಸಿದ ಮಾನವ. ಆದರೂ ಶ್ರಮವಿಲ್ಲದೆ, ಸಮೃದ್ಧವಾಗಿ ದೊರೆಯಬಹುದಾದ 'ಸ್ವರ್ಗಸುಖ'ವೊಂದರ ಕನಸಿನ ಬೆನ್ನು ಹತ್ತಿಕೊಂಡೇ ಬಂದ. ತಾನು ಬಿತ್ತದ ಕಡೆ ಕೊಯ್ಯಲು ಅವನು ಯಾವಾಗಲೂ ಪ್ರಯತ್ನಿಸುತ್ತಲೇ ಇದ್ದಾನೆ.

ಮಾನವ ಯಾವಾಗಲೂ ದೈಹಿಕ ಶ್ರಮವನ್ನು ತಪ್ಪಿಸಿ ಕೊಳ್ಳಲು ಬಳಸಿದ್ದಾನೆ. ಸುಖಕ್ಕಾಗಿ ಇದ್ದ ಬುದ್ಧಿಯನ್ನೆಲ್ಲ ಬಳಸಿದ್ದಾನೆ. ಬುದ್ಧಿಯ ಕಸರತ್ತು ಎಷ್ಟಾದರೂ ಆಗಬಹುದು. ಹೇಗಾದರೂ ಸುಖ ದೊರೆತರೆ ಆಯಿತು. ಒಂದು ವೇಳೆ ಆ ಸುಖದ ಸಂಪಾದನೆಗೆ ಬೆವರು ಕಣ್ಣೀರುಗಳು ಅಗತ್ಯವೆನಿಸಿದರೆ ಅವು ತನ್ನವೇ ಇರಬೇಕೆಂದೇನಿಲ್ಲ. ತನ್ನ ಸುಖಕ್ಕಾಗಿ ಯಾರು ಬೆವರು ಕಣ್ಣೀರು ಹರಿಸಿದರೂ ಆದೀತು. ಅದರಿಂದ ದೊರೆಯುವ ಫಲ ತನ್ನದಾದರೆ ಸರಿ.

ಸುಖಾಪೇಕ್ಷೆಯ ಸ್ವಭಾವವೇ ಸಾಹಸ. ಆದರೆ ದೈಹಿಕ ಶ್ರಮವೊಂದನ್ನು ಬಿಟ್ಟು ಅವನು ಏನನ್ನು ಬೇಕಾದರೂ ಮಾಡಲು ಸಿದ್ಧ. ಆ ಸಾಹಸದ ಫಲವಾಗಿ ಸೃಷ್ಟಿಯಾದುದೇ ಗುಲಾಮಗಿರಿ. ಇದರಿಂದ ಒಬ್ಬರು ಅಥವಾ ಕೆಲವರು ಸುಖವಾಗಿ ಜೀವಿಸಲು ಅನೇಕರು ಬೆವರು ಹರಿಸಿ ದುಡಿದು ಮಡಿಯಬೇಕಾಯಿತು. ಬಹುತೇಕ ಎಲ್ಲ ಪುರಾತನ ನಾಗರಿಕತೆಗಳೂ ಈ ಗುಲಾಮಗಿರಿಯನ್ನೇ ಆಧರಿಸಿದ್ದು, ಗುಲಾಮರು ರೊಚ್ಚಿಗೆದ್ದ ಕೂಡಲೇ ಅಥವಾ ಸುಖಾಪೇಕ್ಷಿಗಳ ವೈಭವ ವಿಲಾಸಗಳು ಶಿಥಿಲಗೊಂಡ ಕೂಡಲೇ ಛಿದ್ರಗೊಂಡಿವೆ. ಮಧ್ಯಯುಗದಲ್ಲಿ ಈ ಗುಲಾಮಗಿರಿಯ ಸ್ಥಳದಲ್ಲಿ ಬದಲಾವಣೆಯಾದ ಕಾಲಕ್ಕೆ ಹೆಚ್ಚು ಹೊಂದಿಕೊಂಡ ಜೀತಗಾರಿಕೆ ಬಂದಿತು. ಆಧುನಿಕ ಕಾಲದಲ್ಲಿ ಅದೂ ಸಹ ಹೋಗಿ ಆ ಸ್ಥಳವನ್ನು ಬಂಡವಾಳಶಾಹಿ ವರ್ಗಕ್ಕಾಗಿ ಸಂಬಳಕ್ಕೆ ದುಡಿಯುವ ಶ್ರಮಜೀವಿಗಳು ತುಂಬಿದ್ದಾರೆ.

ಈ ಎಲ್ಲ ಯುಗಗಳಲ್ಲೂ 'ಮಾನವ ಶ್ರಮ' ಅತ್ಯಂತ ಅಗತ್ಯವೆಂದರೂ ಕಷ್ಟದಾಯಕ ಎಂದು ಪರಿಗಣಿಸಲ್ಪಟ್ಟಿದೆ. ಜೀವನ ಮತ್ತು ನಾಗರಿಕತೆಗಳ ವ್ಯವಹಾರ ಸಾಧ್ಯತೆಗಾಗಿ ಅದನ್ನು ನಿರ್ವಹಿಸಲಾಗಿದೆ.

ಭಾರತದಲ್ಲಿ ನಾವು ವರ್ಣಗಳ ಆಧಾರದ ಮೇಲೆ ಒಂದು ವಿಚಿತ್ರ ಸಾಮಾಜಿಕ ಪದ್ಧತಿಯನ್ನು ಕಂಡುಹಿಡಿದೆವು. ಆರಂಭದಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯ ಎಂಬ ಎರಡು ವರ್ಣಗಳು ಮಾತ್ರ ಇದ್ದವು. ಕ್ರಮೇಣ ಅವು ನಾಲ್ಕು ಆದವು. ಮತ ಕೃತಿಗಳ ಪ್ರಕಾರ ವರ್ಣಾಶ್ರಮ ಧರ್ಮವು ಪ್ರಕೃತಿ(ಸ್ವಭಾವ) ಮತ್ತು ಪ್ರವೃತ್ತಿ(ಕರ್ಮ)ಗಳನ್ನು ಆಧರಿಸಿತ್ತು. ವಾಸ್ತವ ಜೀವನದಲ್ಲಿ ಒಬ್ಬ ವ್ಯಕ್ತಿಯ ಸ್ಥಾನಮಾನವನ್ನು ನೈತಿಕ ಮಟ್ಟದಿಂದ ನಿಷ್ಕರ್ಷೆ ಮಾಡದೆ ಆತನು ಉದ್ಯುಕ್ತನಾಗಿದ್ದ ಉದ್ಯೋಗದಿಂದ

---

* ಜಾನಪದ ವಿದ್ವಾಂಸರು, # ೪೦೬, ಪ್ರಶಾಮ, 'ಎಫ್' ರಸ್ತೆ, ３ನೇ ಫೇಸ್, ಐಡಿಯಲ್ ಹೋಮ್ಸ್ ಟೌನ್‌ಶೀಪ್, ರಾಜರಾಜೇಶ್ವರಿನಗರ, ಬೆಂಗಳೂರು-೯೮







ಅಳೆಯಲಾಗಿತ್ತು. ಕಾಲಗತಿಯಲ್ಲಿ ಕರ್ಮ ಎನುವುದು ಬಹುತೇಕ ಈ ಸ್ವಭಾವ ಎನ್ನುವುದನ್ನೇ ತಳ್ಳಿ ಹಾಕಿತು. ಇದರಿಂದಾಗಿ ಭಾರತದಲ್ಲಿ ನಾಲ್ಕು ವರ್ಣಗಳ ಸ್ಥಳದಲ್ಲಿ ವೃತ್ತಿ ಮತ್ತು ವಾಡಿಕೆಗಳನ್ನು ಆಧರಿಸಿ ನಾಲ್ಕು ಸಾವಿರ ಜಾತಿಗಳು ಏರ್ಪಟ್ಟವು.

ಇತಿಹಾಸದ ಅವಧಿಯಲ್ಲಿ ಈ ವೃತ್ತಿವಾಡಿಕೆಗಳು ಅಥವಾ ಉದ್ಯೋಗಗಳು ಜಾತಿ ಭ್ರಾಂತಿ ಮೂಲವಾದ ವಿಲಕ್ಷಣ ಪರಂಪರೆಗೆ ಕಾರಣವಾದವು. ಕೇವಲ ಧಾರ್ಮಿಕ ಕಾರ್ಯಗಳನ್ನು ಮಾಡುವುದು ಉನ್ನತ ಜಾತಿ ಎನಿಸಿತು. ಕೆಳದರ್ಜೆಯ ಹಾಗೂ ಬೇಸರದ ದೈಹಿಕ ಶ್ರಮದ ಕೆಲಸ ಮಾಡುವುದು ಕೀಳು ಜಾತಿಯಾಯಿತು. ನಾಲ್ಕು ಸಾವಿರ ಮೆಟ್ಟಿಲುಗಳ ಈ ಒಂದು ಸಾಮಾಜಿಕ ಏಣಿಗೆ ಭಂಗಿ ಬುಡದ ಮೆಟ್ಟಿಲಾದ, ವಾಸ್ತವವಾಗಿ, ಒಬ್ಬರ ಹೆಗಲ ಮೇಲೆ ಒಬ್ಬರು ನಿಂತ ಈ ಏಣಿಯ ತುತ್ತ ತುದಿಯಲ್ಲಿ ಬ್ರಾಹ್ಮಣ ನಿಂತ. ತಾನು ಮಾಡುವ ಸ್ವಸ್ತಿವಾಚನಕ್ಕೆ ಬದಲಾಗಿ ಎಲ್ಲ ಭೌತಿಕ ಭೋಗವಸ್ತುಗಳನ್ನು ಬ್ರಾಹ್ಮಣನೆನಿಸಿಕೊಂಡವನು ಪಡೆಯುತ್ತಿದ್ದ. ಭಂಗಿ ಕಸಗುಡಿಸಬೇಕಾಗಿ ಬಂದು ಅಸ್ಪೃಶ್ಯನಾದ. ದುಡಿಮೆಯ ದುರಂತ ಆರಂಭವಾದುದೇ ಇಲ್ಲಿ ; ವರ್ಗಭೇದದ ಸುಳಿದೆಗೆದುದೇ ಇಲ್ಲಿ. ಶ್ರೇಷ್ಠ-ಕನಿಷ್ಠಗಳ ಸಮರ್ಥನೆಗೆ ಸುಖಾಪೇಕ್ಷಿಗಳ ಕೈಗೆ ಸಿಕ್ಕಿದ ಪ್ರಭಾವಪೂರ್ಣ ಅಸ್ತ್ರವೆಂದರೆ ಧರ್ಮ. ಧರ್ಮದ ಹೆಸರಿನಲ್ಲಿ ನಡೆಸುವ ಪೂಜೆ ಪೌರೋಹಿತ್ಯಗಳು **'ಲೋಕ ಕಲ್ಯಾಣಾರ್ಥ'** ಎಂಬ ರೂಪು ಪಡೆದವು. ಒಟ್ಟಾರೆ, ಈ ಪೂಜೆ ಪೌರೋಹಿತ್ಯಗಳಿಗೆ ಸಾಮಗ್ರಿಯಾದ ಶ್ರಮಜೀವಿಗೆ ಮಾತ್ರ ಸಮಾಜದಲ್ಲಿ ಗೌರವ ವಿರಲಿಲ್ಲ. ಈ ಅನಿಷ್ಟ ಅತ್ಯಂತ ಆಳವಾಗಿ ಬೇರುಬಿಟ್ಟು ವ್ಯಾಪಕವಾಗಿ ಹರಡಿತು. ಏಕೆಂದರೆ ಅದು ಧರ್ಮ ಮತ್ತು ಸಂಪ್ರದಾಯಗಳೆರಡರ ಅಂಗೀಕಾರವನ್ನು ಪಡೆದಿತ್ತು.

ಏನೇ ಇದ್ದರೂ. ವಿವಿಧ ನಾಗರಿಕತೆಗಳಲ್ಲಿ ನಾನಾ ರೂಪು ಮತ್ತು ಆಕಾರಗಳನ್ನು ತಾಳಿರುವ ದೈಹಿಕ ಶ್ರಮದ ಅವನತಿಯು ಆರ್ಥಿಕ ಮತ್ತು ಸಾಮಾಜಿಕ ಅನಿಷ್ಟಗಳಿಗೆ ಕಾರಣವಾಯಿತು. ಸಮಾಜದಲ್ಲಿ ಒಂದು ಕಡೆ ಕೆಲವೇ ಜನ ಶ್ರೀಮಂತರು ಮತ್ತು ಸೋಮಾರಿಗಳಿದ್ದರೆ, ಮತ್ತೊಂದು ಕಡೆ ಅನೇಕ ಜನ ಅತ್ಯಂತ ಬಡವರು ಮತ್ತು ಶ್ರಮಜೀವಿಗಳಾದವರು. ಶ್ರೀಮಂತರು ಯಥೇಚ್ಛ ವೈಭವ ಹಾಗೂ ಅನಗತ್ಯ ವಸ್ತುಗಳ ಉತ್ಪಾದನೆಗೆ ಶ್ರಮ ಜೀವಿಗಳನ್ನು ಬಳಸಿಕೊಂಡರು. ಅಗತ್ಯವಸ್ತುಗಳ ಉತ್ಪಾದನೆ ಬೇಡಿಕೆಗಿಂತ ಕಡಿಮೆಯಾಯಿತು.ಆದುದರಿಂದಲೇವಿಶ್ವವುಯಾವಾಗಲೂ ಅಗತ್ಯವಸ್ತುಗಳಕೊರತೆಯನ್ನುಅನುಭವಿಸುತ್ತಿರುವುದು.

ಈಗ ಜೀವನದ ಅಗತ್ಯಗಳ ಬಗೆಗೆ ಹೆಚ್ಚು ಹೆಚ್ಚು ಜಾಗೃತವಾಗುತ್ತಿರುವ ಭಾರಿ ಪ್ರಮಾಣದ ಜನಸಂಖ್ಯೆ ವಿಶ್ವಾದ್ಯಂತ ತ್ವರಿತಗತಿಯಲ್ಲಿ ಬೆಳೆಯುತ್ತಿದೆ. ಮಾನವ ಸ್ವಭಾವವು ಕೊರತೆಯಿಲ್ಲದ ಜೀವನವನ್ನು ಬಯಸುತ್ತಿದೆ. ತನ್ನ ಭೌತಿಕ ಮಟ್ಟವನ್ನು ಎತ್ತರಿಸಲು ಮನುಷ್ಯ ತೀವ್ರ ಪ್ರಯತ್ನ ನಡೆಸಿದ್ದಾನೆ. ಆದರೆ ದೈಹಿಕ ಶ್ರಮಕ್ಕೆ ಮಾನ್ಯತೆ ಕೊಡದ ಹೊರತು ಇದು ಅಸಾಧ್ಯವೆಂಬುದನ್ನು ನಾವು ಮರೆಯುವಂತಿಲ್ಲ.

ಈ ಹಿನ್ನಲೆಯಲ್ಲಿ ನಾವು ಬಸವಣ್ಣನವರ ಸಾಮಾಜಿಕ ನೀತಿಯನ್ನು ನೋಡಬೇಕಾಗುತ್ತದೆ. ಬಸವಣ್ಣನವರು ರೂಪಿಸಿದ ಸಮಾಜಕ್ಕೆ ಈ ಶ್ರಮದ ದುಡಿಮೆಯೇ ಮೊದಲ ಆಧಾರವಾಗಿತ್ತು. ಆ ದುಡಿಮೆಗೇ ಶರಣರು **'ಕಾಯಕ'** ಎಂದಿರುವುದು. ಈ ಕಾಯಕದ ಮಹತ್ವವನ್ನು ರಷ್ಯದ ಟಾಲ್‌ಸ್ಟಾಯ್, ಭಾರತದ ಗಾಂಧಿ ಸ್ಪಷ್ಟವಾಗಿ ಸಾರಿದ್ದಾರೆ. ತನ್ನ ಅನ್ನವನ್ನು ತನ್ನ ಶ್ರಮದಿಂದಲೇ ಗಳಿಸಬೇಕೆಂಬುದು ಮಾನವನ ಮೊದಲ ಹಾಗೂ ನಿರ್ವಿವಾದವಾದ ಕರ್ತವ್ಯ ಎಂದು ಅವರು ಹೇಳಿದ್ದಾರೆ. **'ನಿನ್ನ ಶ್ರಮದ ಬೆವರಿನಲ್ಲಿ ನಿನ್ನ ರೊಟ್ಟಿಯನ್ನು ತಿನ್ನು'** ಎನ್ನುವುದು ಜೀವನದ ಮೂಲ ಹಾಗೂ ಅಗತ್ಯ ಶಾಸನ. ಶ್ರಮವೊಂದೇ ಜೀವನಕ್ಕೆ ಚೇತನ. ಮಾನವನ ಕಾರ್ಪಣ್ಯ, ಹಸಿವು, ಅಪರಾಧಗಳಿಗೆ ಈ ಮಹೋನ್ನತ ಜೀವನ ಸೂತ್ರದ ಉಪೇಕ್ಷೆಯೇ ಕಾರಣ.

ಮಾನವ ಅದೆಷ್ಟೋ ಕೆಲಸಗಳನ್ನು ಮಾಡುತ್ತಾನೆ. ಅಸಂಖ್ಯಾತ ಕಾನೂನು ಮತ್ತು ನಿಯಮಗಳನ್ನು ಅಂಗೀಕರಿಸುತ್ತಾನೆ. ಆದರೆ ಇವಾವುವೂ ಸಮಸ್ಯೆಗಳಿಗೆ ಪರಿಹಾರ ನೀಡಿಲ್ಲ. ಏಕೆಂದರೆ ಹಸಿವನ್ನು ಪರಿಹರಿಸಲು ಅಗತ್ಯವಾದುದು ಜೀವನಾಧಾರದ ದೈಹಿಕ ಶ್ರಮ. ಮಾನವನು ತನ್ನ ಜೀವನದ ಪ್ರಮುಖ ಅಗತ್ಯಗಳಾದ ಆಹಾರ ಬಟ್ಟೆ ಮತ್ತು ವಸತಿ ಮೊದಲಾದವನ್ನು ತನ್ನ ವೈಯಕ್ತಿಕ ಶ್ರಮದಿಂದ ಉತ್ಪಾದಿಸಬೇಕು. ಅವನ ಉತ್ಪಾದನೆಯು ಅಗತ್ಯಕ್ಕೆ ಅನುಗುಣವಾದ ಬಳಕೆಗೆ ಆಗಬೇಕೇ ವಿನಹ, ತನ್ನ ದುರ್ಬಲ ಸಹೋದರರಿಗೆ ಲಾಭಕ್ಕೆ ಮಾರಾಟವಾಗಬಾರದು. ದೈಹಿಕ ಶ್ರಮದ ಧರ್ಮ ಅದು. ಬಸವಣ್ಣನವರ ಸಾಮಾಜಿಕ ನೀತಿಯಲ್ಲಿ ಇದೇ **'ದಾಸೋಹ'**ದ ಅರ್ಥ ಪಡೆದಿರುವುದು. ವ್ಯಕ್ತಿಯ ದೈಹಿಕ ದುಡಿಮೆ ಎಂದರೆ ಸಮಾಜ ಕ್ಷೇಮದ ದೃಷ್ಟಿಯಿಂದ ಪಡುವ ಶ್ರಮ ಸಮಾಜದ ಒಟ್ಟು ಸಂಪದ ಅಭಿವೃದ್ಧಿಗೆ ಸಾಧಕವಾಗುತ್ತದೆ. ಅಸಮಾನತೆಯು ನಿವಾರಣೆಗೆ







ನೆರವಾಗುತ್ತದೆ. ಬಸವಣ್ಣನವರು ಮಹತ್ವ ನೀಡಿದ ಕಾಯಕದ ವೈಶಿಷ್ಟ್ಯವೆಂದರೆ ಶ್ರಮದ ದುಡಿಮೆ. ಅಂತಹ ದುಡಿಮೆಯಿಂದ ದೇಹದ ಆರೋಗ್ಯ ಉತ್ತಮಗೊಳ್ಳುತ್ತದೆ. ಕೃತಕ ಹಾಗೂ ನಿರಾಳ ಜೀವನ ಸರಳ ಹಾಗೂ ಸಹಿಷ್ಣು ಜೀವನವಾಗುತ್ತದೆ. ಕಾಯಕದಿಂದ ಬೌದ್ಧಿಕ ಮತ್ತು ದೈಹಿಕ ದುಡಿಮೆಗಳ ಮಧ್ಯೆ ಇರುವ ಅಂತರ ಮಾಯವಾಗುತ್ತದೆ. ಅಂದರೆ ಮಾನಸಿಕ ಕೆಲಸದ ದೊಡ್ಡಸ್ತಿಕೆ ಮತ್ತು ದೈಹಿಕ ಕೆಲಸದ ನಿಕೃಷ್ಟತೆಗಳು ಮಾಯವಾಗಿ ಜಾತಿ ಅಥವಾ ವರ್ಗಭೇದಗಳು ಇಲ್ಲವಾಗುತ್ತವೆ.

ಕಾಯಕ ಸೂತ್ರದ ಪಾಲನೆಯಿಂದ ಬಸವಣ್ಣನವರು ಸಮಾಜ ರಚನೆಯಲ್ಲಿ ಒಂದು ಮೌನ ಕ್ರಾಂತಿಯನ್ನುಂಟು ಮಾಡಿದರು. ಕಾಯಕದಿಂದ ವ್ಯಕ್ತಿಯ ಹೋರಾಟ ತನ್ನದಾಗಿ ವೈಯಕ್ತಿಕ ಅಸ್ತಿತ್ವಕ್ಕೆ ಬದಲಾಗಿ ಸಮಾಜದ ಸೇವೆಗಾಗಿ ಮೀಸಲಾಯಿತು. ಸಮಾಜದಲ್ಲಿನ ಪಾಶವೀ ಶಾಸನಕ್ಕೆ ಬದಲಾಗಿ ಮಾನವೀ ಶಾಸನ ಸೃಷ್ಟಿಯಾಯಿತು.

ಶರಣರ ಅರ್ಥಹೀನ ದೈಹಿಕ ದುಡಿಮೆಯಲ್ಲ; ಅನ್ಯರ ಸುಖಕ್ಕಾಗಿ ಬೆವರು ಹರಿಸುವ ನೀತಿಹೀನ ಜೀತವಲ್ಲ ಅಥವಾ ಭೌತಿಕ ಸುಖವೇ ಅದರ ಪರಮೋದ್ದೇಶವಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ದುಡಿದೇ ಉಣ್ಣಬೇಕು, ಆ ದುಡಿಮೆ ಸತ್ಯವಾಗಿರಬೇಕು, ಶುದ್ಧವಾಗಿರಬೇಕು. ದುಡಿಯುವುದು ಜೀವನದ ಆಧಾರಕ್ಕಾದರೂ ದುಡಿಮೆಯ ಫಲವನ್ನು ಸಮಾಜಕ್ಕೆ ಅರ್ಪಿಸಬೇಕು. ನಾಳೆಗೆಂದು ಕೂಡಿಡದೆ ಅಂದಂದಿನ ಫಲ ಅಂದಂದೇ ಬಳಕೆಯಾಗಬೇಕು. ಮಾಡಿದೆನೆಂಬುದು ಮನದಲ್ಲಿ ಹೊಳೆಯಬಾರದು- ಇದು ಕಾಯಕದ ಧರ್ಮ. ಕಾಯಕದ ಸಹಜ ಚಿತ್ರವನ್ನು ನೀಡುವ ಒಂದು ವಚನ ಹೀಗಿದೆ;

**ಕಂದಿಸಿ ಕುಂದಿಸಿ ಬಾಧಿಸಿ ನೋಯಿಸಿ**
**ಕಂಡಕಂಡವರ ಬೇಡಿ ತಂದು ಜಂಗಮ ಲಿಂಗಕ್ಕೆ**
**ಮಾಡಿದೆನೆಂಬ ದಂದುಗದ ಮಾಟಕ್ಕೆ ಲಿಂಗನೈವೇದ್ಯ**
**ಸಲ್ಲದು ತನುಕರಗಿ, ಮನಬಳಲಿ, ಬಂದ ತೆರದನುವರಿದು**
**ಸಂದಿಲ್ಲದೆ ಸಂಶಯವಿಲ್ಲದೆ**
**ಜಂಗಮಲಿಂಗಕ್ಕೆ ದಾಸೋಹವೇ ಮಾಟ,**
**ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು**
**ಲಿಂಗಕ್ಕರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ**
**ಇದು ಕಾರಣ ಶುದ್ಧ ಕಾಯಕದ ನಿತ್ಯದ್ರವ್ಯವೆಂದರೆ**
**ಚಂದೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯಾ!**

ಕಾಯಕ ಶಬ್ದಕ್ಕೆ ವ್ಯಾಖ್ಯಾನ ಬರೆದಂತಿರುವ ಈ ವಚನವನ್ನು ಗಮನಿಸಿದರೆ ದುಡಿಮೆಯ ಮಹತ್ವದ ಅರಿವು ನಮಗಾಗದೇ ಇರದು. ಬಸವಣ್ಣನವರು ಧರ್ಮದ ಹೆಸರಿನಲ್ಲಿ ಜಾತಿಯ ತಳಹದಿಯ ಮೇಲೆ ಸಮಾಜವನ್ನು ರಚಿಸಲಿಲ್ಲ. ಸಮಾಜ ರಚನೆಗೆ ಧರ್ಮವನ್ನೇ ಆಧಾರವಾಗಿ ಮಾಡಿಕೊಂಡರು. ಎಲ್ಲಕ್ಕಿಂತ ಮೊದಲು ತಮ್ಮನ್ನು ತಾವು ಜಾತಿಯ ಬಲೆಯಿಂದ ದೂರವಿರಿಸಿಕೊಂಡರು;

**'ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ**
**ಕಷ್ಟತನದ ಹೊರೆಯ ಹೊರಿಸದಿರಯ್ಯಾ**
**ದಾಸಯ್ಯ ಶಿವದಾನವನೆರೆಯ ನೋಡಯ್ಯ**
**ಕಕ್ಕಯ್ಯನೊಕ್ಕುದನಿಕ್ಕು ನೋಡಯ್ಯ**
**ಮನ್ನಣೆಯ ಚನ್ನಯ್ಯನೆನ್ನುವ ಮನ್ನಿಸ ನೋಡಯ್ಯ'**

ಉತ್ತಮ ಕುಲವೆಂಬುದು ತನಗೆ ಹೊರೆ ಎಂದು ಭಾವಿಸಿದ್ದಾರೆ ಬಸವಣ್ಣನವರು. ಸಮಾಜದ ಕೆಳಸ್ತರದಲ್ಲಿದ್ದ ವ್ಯಕ್ತಿಗಳು ತನ್ನನ್ನು ಮನ್ನಿಸುವುದಿಲ್ಲ ಎನ್ನುವ ಮಾತು ಎಷ್ಟು ಅರ್ಥಪೂರ್ಣವಾಗಿದೆ! ಬಸವಣ್ಣ ಬಯಸಿದ್ದು ಮೇಲ್ವರ್ಗದವರ ಮನ್ನಣೆಯನ್ನಲ್ಲ. ಅವರು ಕೆಳಸ್ತರದವರ ಕೆಳಗೆ ನಿಂತು ಮಾತಾಡುತ್ತಾರೆ. **'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೂಡಲಸಂಗನ ಶರಣರೇ ಕುಲಜರು'** ಎನ್ನುವ ಮಾತಿನಲ್ಲಿ ಕುಲದ ಅರ್ಥವನ್ನು ಹೇಳಿದ್ದಾರೆ. ಇಲ್ಲಿ ತನ್ನ ಮೇಲ್ಮೆಯನ್ನಷ್ಟೇ ತಿರಸ್ಕರಿಸಿಲ್ಲ. ಇತರ ಕೀಳ್ಮೆಯನ್ನೂ ತಿರಸ್ಕರಿಸಿರುವುದನ್ನು ನಾವು ಕಾಣುತ್ತೇವೆ.

ಬಸವಣ್ಣನವರು ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯಗಳಿಗಿಂತ ಧಾರ್ಮಿಕ ಸ್ವಾತಂತ್ರ್ಯ ಮುಖ್ಯವೆಂದು ಸಾರಿದರು. ಜಾತಿ, ಲಿಂಗ, ವಯಸ್ಸು, ದೇಶಭಾಷೆಗಳ ಕಾರಣಕ್ಕಾಗಿ ಸಮಾಜದ ಯಾವುದೇ ವರ್ಗವನ್ನು ಧರ್ಮದ ಹೆಸರಿನಲ್ಲಿ ಹತ್ತಿಕ್ಕುವುದನ್ನು ಬಸವಣ್ಣನವರು ವಿರೋಧಿಸಿದರು.

ಅವರು ರೂಪಿಸಿದ ಸಮಾಜಕ್ಕೆ ಸ್ವಾತಂತ್ರ್ಯ ಮತ್ತು ಸಮಾನತೆಗಳೇ ಸೂತ್ರವಾಗಿದ್ದವು. ಆದರೆ ಇಂದಿನ ಗತಿ ಏನಾಗಿದೆ? ಧರ್ಮದ ಜಗಲಿಯ ಮೇಲೆ ಜಾತಿಗಳು ಮೆರೆಯುವಂತಾಗಿದೆ. ಜಾತಿಯನ್ನು ಹೊರಗಿಟ್ಟು ಧರ್ಮವನ್ನು ಒಳಗಿಟ್ಟುಕೊಳ್ಳುವ ಬದಲು, ಕದಿಯುವ ಬೆಕ್ಕನು ಒಳಗಿಟ್ಟುಕೊಂಡು ಕಾಯುವ ನಾಯನ್ನು ಹೊರಗಿಟ್ಟಂತೆ, ಧರ್ಮವನ್ನೇ ಹೊರಗಿಟ್ಟು ಜಾತಿಯನ್ನು ಒಳಗಿಟ್ಟುಕೊಂಡಿದ್ದೇವೆ. ನಾಯಿಯನ್ನು **'ನಾರಾಯಣ'** ಎನ್ನುವ ನಮಗೆ, ಹಾವನ್ನು **'ಆದಿಶೇಷ'** ಎಂದು ಕರೆಯುವ ನಮಗೆ,

ಹಂದಿಯನ್ನು 'ವರಾಹಸ್ವಾಮಿ' ಎಂದು ಪೂಜಿಸುವ ನಮಗೆ ಕೋತಿಯನ್ನು 'ಆಂಜನೇಯ' ಎಂದು ಭಜಿಸುವ ನಮಗೆ ಮಾನವನನ್ನು ಮಾನವ ಎಂದು ಕಾಣುವ ಸಭ್ಯತೆ ಸಜ್ಜನಿಕೆಗಳಿಲ್ಲ. ಆದರೆ ಮಾನವ-ಮಾನವರ ಮಧ್ಯೆ ಯಾವ ತಾರತಮ್ಯವನ್ನೂ ಬಸವಣ್ಣನವರು ಕಾಣಲಿಲ್ಲ. ಕೊನೆಗೆ ಅವರು ಹೆಣ್ಣು-ಗಂಡೆಂಬ ವ್ಯತ್ಯಾಸವೂ ಸಲ್ಲದೆಂದು ಹೇಳಿದರು. **'ಶರಣಸತಿ-ಲಿಂಗಪತಿ'** ಎಂದಿರುವಾಗ ಎಲ್ಲರೂ ಸಮಾನ ಎಂದರು. ಎಲ್ಲರಿಗೂ ಪೂಜಾ ಸ್ವಾತಂತ್ರ್ಯವಿದೆ ಎಂದು ಪೂಜಾರಿಕೆಯ ಮಧ್ಯಸ್ಥಿಕೆಯನ್ನೇ ಹಳಿದರು. ಈ ಸಂದರ್ಭದಲ್ಲಿ ಬಸವನ ಉಸಿರಾಗಿ ಬೆಳೆದ ನಮ್ಮ ಹಳ್ಳಿಯ ಹೆಣ್ಣೊಬ್ಬಳು ತನ್ನ ಬೀಸುವ ಪದದಲ್ಲಿ ಆಡಿರುವ ಮಾತುಗಳು ನಿಜಕ್ಕೂ ನಮ್ಮನ್ನು ಸೋಜಿಗಗೊಳಿಸುತ್ತವೆ. ಬಸವಣ್ಣನವರ ಸಂದೇಶ ಹೇಗೆ ಜನಸಾಮಾನ್ಯರನ್ನು ಮುಟ್ಟಿ ತಟ್ಟಿ ಜಾಗೃತ ಗೊಳಿಸಿದೆ ಎನ್ನುವುದು ಇದರಿಂದ ವೇದ್ಯವಾಗುತ್ತದೆ;

**ದೇವರಿಗೆ ಹೋಗಬೇಕು ದಾರಿಬಿಡೋ ಪೂಜಾರಿ**
**ದೇವರಿಗು ನನಗು ಒಳಮಾತು-ಬೈರುವನ**
**ಶಾವಿಗ್ಹೋಗಿ ಕೈಯ ಮುಗಿದೇನು !**

ಎನ್ನುತ್ತಾಳೆ ಆ ಹೆಣ್ಣು! ಪೂಜಾರಿ ಧರ್ಮವನ್ನು ವಿರೋಧಿಸಲು ಇದಕ್ಕಿಂತ ಪರಿಣಾಮಕಾರಿಯಾದ ಮಾತು ಬೇಕೇ? ಶ್ರಮಜೀವಿ ತಾಯಿ ಬಸವಣ್ಣನವರ ವಿಚಾರವನ್ನು ಹೇಗೆ ಅರಗಿಸಿಕೊಂಡಿದ್ದಾಳೆ ನೋಡಿ.

ಬಸವಣ್ಣನವರು ರೂಪಿಸಿದ ಸಮಾಜಕ್ಕೆ ಒಂದು ಶಿಸ್ತಿನ ಸಂಸ್ಕಾರವಿತ್ತು. ದೈವೀಧ್ಯಾನ, ಕಾಯಕದರ್ಶನ, ದಾಸೋಹ ಭಾವನೆ, ಸ್ತ್ರೀಪುರುಷ ಸಮಾನತೆ, ವಿಚಾರ ಮಂಥನ, ಶೂನ್ಯ ಸಂಪಾದನೆ – ಇವು ಆ ಶಿಸ್ತಿನ ಚೌಕಟ್ಟುಗಳು. ಈ ಚೌಕಟ್ಟುಗಳ ಪ್ರವೇಶಕ್ಕೆ ದುರ್ಗಮವಾದ ಭದ್ರಕೋಟೆ ಗಳಾಗಿರಲಿಲ್ಲ. ಸರ್ವರೂ ಸುಲಭವಾಗಿ ಅರಿತು ಆಚರಿಸುವಂತಹ ಮುಕ್ತದ್ವಾರಗಳಾಗಿದ್ದವು. ಎಂತಲೇ ನಾಡು ನುಡಿಗಳ ಗಡಿ ದಾಟಿ ಸಹಸ್ರ ಸಹಸ್ರ ಜನ ಬಂದು ಕಲ್ಯಾಣದಲ್ಲಿ ಸೇರಿದರು. ಬಸವಣ್ಣನವರು ಆ ಅಸಂಖ್ಯಾತರ ಕೇಂದ್ರ ಬಿಂದುವಾದರು.

ಬಸವಣ್ಣವರ ಸಮಾಜ ವ್ಯವಸ್ಥೆಯಲ್ಲಿ ಮೂರು ಮುಖ್ಯ ಕಾರ್ಯಸೂತ್ರಗಳಿವೆ. ಅವೆಂದರೆ ಅಜ್ಞಾನ ನಿರ್ಮೂಲನ, ಬಡತನ ನಿವಾರಣೆ ಮತ್ತು ಶೀಲ ಸಂಪಾದನೆ. ಈ ಸೂತ್ರಗಳೇ ನಮ್ಮ ಇಂದಿನ ಎಲ್ಲ ಅನಿಷ್ಟಗಳಿಗೂ ಪರಿಹಾರ ನೀಡಬೇಕಾಗಿದೆ.

## ಅಧುನಿಕ ವಚನಗಳು

ಅಧಿಕಾರಕ್ಕಾಗಿ ಜಾತಿ ಹೆಸರಿನಲ್ಲಿ ಮನಸ್ಸು ಒಡೆಯುತಿಹರಯ್ಯ
ದಿನಕ್ಕೊಂದು ಹೊಸ ಕಾಯ್ದೆ ಸೃಷ್ಟಿಸುತಿಹರಯ್ಯ
ಒಡಕು ಬದಲಾವಣೆಯ ಬಯಸುವವರು ಜನಮತದ
ಮಡುವಿನಲ್ಲಿ ಮುಳುಗಿ ಹೋಗುತಿಹರಯ್ಯ
ಎಂದು ನಿಲ್ಲುವುದು ಭೇದದಾ ಅಟ್ಟಹಾಸ
ನೀನೊಮ್ಮೆ ಹೇಳಾ ನಿಡುಮಾಮಿಡಿ ಗುರುವರಾ

ಹಣವಿದ್ದು ತುಂಡು ಬಟ್ಟೆಯ ಉಡುವವಳ ನೋಡಲಾಗದಯ್ಯ
ಸಂಸ್ಕೃತಿ ಸದಾಚಾರ ಮರೆತು ಮರೆಯುತಿಹರಯ್ಯ
ಅತ್ಯಾಚಾರ ಕೊಲೆಗೆ ದಾರಿ ತೋರಿಸುತಿಹರಯ್ಯ
ವಿದೇಶಿಯರಿಗೆ ದೇಶಿಯತೆಯನ್ನು ಮಾರದಂತೆ
ತಡೆಯಲಾಗದೆ ನಿಡುಮಾಮಿಡಿ ಗುರುವರಾ

ಆ ಹಿರಿಯ ಜೀವ ಹೇಳಿತು, ಒಳ ಹುರುಳ ಚಿಮ್ಮಿಸಿ
ನೀನೊಮ್ಮೆ ವಚನ ಬರೆಯೆಂದು
ಬರೆಯಲಾಗದೆ ಬಚ್ಚಿಟ್ಟುಕೊಂಡು ಬಚ್ಚಿಟ್ಟುಕೊಂಡು
ಮುಚ್ಚಿಟ್ಟು ಮೂರು ಪದ ಬರೆದೆನಯ್ಯಾ
ಅವುಗಳನ್ನು ನಿನ್ನ ಪಾದಂಗಳಿಗೆ ಅರ್ಪಿಸುವೆ
ನಿಡುಮಾಮಿಡಿ ಗುರುವರಾ

ಕೇಳುವರು ಒಬ್ಬೊಬ್ಬರು ನಿಮ್ಮ ಕುಲ ಯಾವುದೆಂದು
ಜಾತಿ ಧರ್ಮ ಮೀರಿ ಬದುಕಬೇಕೆನ್ನುವರು
ಹುಡುಕುತಿಹರು ನಾವು ಯಾರೆಂದು
ಜಾತ್ಯಾತೀತ ಎನ್ನುತ್ತಲೇ, ಜಾತಿ ನಿಷ್ಠೆ ತೋರುವರಯ್ಯ
ನಿಡುಮಾಮಿಡಿ ಗುರುವರಾ ನೀ ಹೇಳಯ್ಯ
ಜಾತಿ ಸತ್ಯವೋ ? ವಾಸ್ತವವೋ ?

– ವಿದ್ಯಾಶ್ರೀ ನಲವಡೆ
# ೪೯/೧, ನಿಡುಮಾಮಿಡಿ ಮಠ
ಹೆಚ್.ಬಿ. ಸಮಾಜ ರಸ್ತೆ, ಬಸವನಗುಡಿ
ಬೆಂಗಳೂರು-೦೪

"ಮಾತೃಭಾಷೆಯನ್ನು
ಒಂದೇ ಸಮನ
ನಿರ್ಲಕ್ಷಿಸಿಕೊಂಡು
ಬಂದಿರುವುದಕ್ಕಾಗಿ ಭಾರಿ
ಬೆಲೆಯನ್ನೇ
ತೆರಬೇಕಾಗುತ್ತದೆ. ಇದರಿಂದ
ರಾಷ್ಟ್ರ ಅಪಾರ ನಷ್ಟವನ್ನು
ಅನುಭವಿಸಿದೆ. ಈ ಸಂಕಲದಿಂದ ರಾಷ್ಟ್ರವನ್ನು ಪಾರು
ಮಾಡುವುದು ಸುಶಿಕ್ಷಿತ ವರ್ಗದ ಪ್ರಥಮ
ಕರ್ತವ್ಯವಾಗಿದೆ."



– ಮಹಾತ್ಮಗಾಂಧಿ



ಲೇಖನ

# ಮಹರ್ಷಿ ವಾಲ್ಮೀಕಿ

– ವಿದ್ಯಾವಾಚಸ್ಪತಿ ಕವಿತಾಕೃಷ್ಣ *



ತಮಸಾ ನದಿಯು ಪ್ರಶಾಂತವಾಗಿ ಹರಿಯುತ್ತಿದೆ. ಮರಗಿಡ ಬಳ್ಳಿಗಳು ಹಸುರುಗಟ್ಟಿ ಕಣ್ಣುಗಳಿಗೆ ಸೊಗಯಿಸುತ್ತಿವೆ. ಹಕ್ಕಿ ಪಕ್ಷಿಗಳು ಗರಿ ಬಿಚ್ಚಿ ಪ್ರಕೃತಿಯ ಮಡಿಲಲ್ಲಿ ಹಾರಾಡುತ್ತಿವೆ. ಕಾಡುಮೃಗಗಳು ನಿರ್ಭೀತಿಯಿಂದ ಓಡಾಡುತ್ತಿವೆ. ಅರಳಿದ ಹೂಗಳು ಸುಗಂಧ ಸೂಸುತ್ತಾ ಚೆಲುವು ಬಡಿಯುತ್ತಿವೆ. ಹಲವಾರು ಪರ್ಣಕುಟೀರಗಳು ತಾಪಸಿಗಳಿಗೆ ನೆಲೆಯಾಗಿ ನಿಂತಿವೆ. ಅಲ್ಲಿ ಸದ್ದುಗದ್ದಲವಿಲ್ಲ, ತಂಟೆ ತಾಪತ್ರಯಗಳಿಲ್ಲ. ತಮಸಾ ನದಿಯ ದಂಡೆಯಲ್ಲೇ ವಾಲ್ಮೀಕಿ ಮುನಿಗಳ ಆಶ್ರಮವಿದೆ. ಆ ಮಹರ್ಷಿಗಳ ತಪಸ್ಸಿನ ಪ್ರಭಾವದಿಂದಾಗಿ ವನವೆಲ್ಲಾ ಪ್ರಶಾಂತವಾಗಿದೆ. ಸುಖ-ಶಾಂತಿಯ ನೆಲೆಯಾಗಿದೆ. ಜ್ಞಾನಾರಾಧನೆಯ ಕೇಂದ್ರವಾಗಿದೆ. ಭಕ್ತಿಯ ಭಂಡಾರವಾಗಿದೆ. ಮುಕ್ತಿಯ ಮಂದಿರವಾಗಿದೆ.

ವಾಲ್ಮೀಕಿಗಳು ಜಗದ ಮೊದಲ ಮಹಾಕವಿಗಳು. ಶ್ರೀಮದ್ರಾಮಾಯಣವೆಂಬ ಮಹಾಕಾವ್ಯವನ್ನು ಬರೆದರು. ರಾಮನಾಮ ಬೀಜವನ್ನು ಸುಜನರ ಎದೆಯ ಹೊಲದಲ್ಲಿ ಬಿತ್ತಿದರು. ಕಾವ್ಯಕೃಷಿಯನ್ನು ಮಾಡಿದರು. ಮೊದಲು ಭಾರತೀಯರ ಬದುಕನ್ನು ಬಂಗಾರ ಮಾಡಿದರು. ಹೊಸ ಸಂಸ್ಕೃತಿ ಆರಂಭಿಸಿದರು. ಜ್ಞಾನದ ಬೆಳಕು ಚೆಲ್ಲಿದರು. ಭಕ್ತಿಯ ಹೆದ್ದಾರಿಯಲ್ಲಿ ನಡೆಸಿದರು. ಮುಕ್ತಿಯ ಸಾಮ್ರಾಜ್ಯಕ್ಕೆ ಕೊಂಡೊಯ್ದರು. ಮಾನವರ ಎದೆಯ ಗೂಡನ್ನು ದೇವರ ಬೀಡಾಗಿಸಿದರು. ಜನ್ಮವಿತ್ತ ಜನನಿ, ಬದುಕಿಗೆ ನೆಲೆಯಿತ್ತ ಜನ್ಮಭೂಮಿ ಸ್ವರ್ಗಕ್ಕಿನ್ನ ಮಿಗಿಲೆಂಬ ದಿವ್ಯಸಂದೇಶವನ್ನು ಇತ್ತರು. ಪುರುಷನಾದ ಶ್ರೀರಾಮನು ಪುರುಷೋತ್ತಮನಾದಂತೆ, ಪಕ್ಷಿ, ಪ್ರಾಣಿ, ಮಾನವ, ದಾನವ, ಕಪಿ, ಕರಡಿ, ಹೆಣ್ಣು, ಗಂಡು, ಮಡಿ, ಮೈಲಿಗೆಗಳೂ ಉನ್ನತಸ್ತರವೇರಲು ಸಾಧ್ಯವೆಂದು ತೋರಿದರು. ಅವರ ದಿವ್ಯವಾಣಿಯಿಂದ ನರ ಸುರನಾದ, ವರವಾದ, ಗುರುವಾದ ಕಡೆಗೆ ಸಾಕ್ಷಾತ್ ಹರನಾದ. ಅಷ್ಟೇಕೆ ವಾಲ್ಮೀಕಿ ಮಹಾಮುನಿಗಳ ಬದುಕೇ ಒಂದು ಭವ್ಯವಾದ ಭಗವದ್ಗೀತೆ ಆಯಿತು.

ವಾಲ್ಮೀಕಿ ಮಹರ್ಷಿಗಳು ಪೂರ್ವಾಶ್ರಮದಲ್ಲಿ ರೂಕ್ಷ ರೂಪದ ಬೇಡನಾಗಿದ್ದರು. ಅವರಿಗೂ ಸಂಸಾರವಿತ್ತು. ಎಲ್ಲರ ಒಡಲು ತುಂಬವ ಹೊಣೆ ಅವರದಾಗಿತ್ತು. ಅದಕ್ಕಾಗಿ ನಿಷಾದರ ವೃತ್ತಿಯಂತೆ ಬೇಟೆಯಾಡಿ ಬದುಕುತ್ತಿದ್ದರು. ಬೇಟೆಗೆ ಪ್ರಾಣಿಗಳು ಸಿಕ್ಕರೆ ಸರಿ. ಇಲ್ಲವಾದರೆ ಸಿಕ್ಕ ಜನರನ್ನೇ ಬೇಟೆಯಾಡಲು ಮುಂದಾಗುತ್ತಿದ್ದರು. ಅವರಿಂದ ನಗ, ನಾಣ್ಯ, ವಸ್ತುಗಳನ್ನು ಅಪಹರಿಸುತ್ತಿದ್ದರು. ಒಟ್ಟಾರೆ ಹಿಂಸಾ ಮಾರ್ಗದಿಂದ ಹಣ ಸಂಪಾದಿಸಿ ಹೊಟ್ಟೆ ಹೊರೆ ಯುತ್ತಿದ್ದರು ಒಮ್ಮೆ ಇವರಿಗೆ ನಾರದ ಮಹರ್ಷಿಗಳು ಎದುರು ತಾಕಿದರು. ಕೂಡಲೆ ವ್ಯಾಧನಾಗಿದ್ದ ಅವರು ಎದುರಾಳಿಯ ಮೇಲೆ ದಾಳಿ ಮಾಡಲು ಮುಂದಾದರು. ಧನ, ಕನಕ ಕೀಳುವ ಸನ್ನಾಹ ನಡೆಸಿದರು. ಜ್ಞಾನದ ಗಣಿಯಾಗಿದ್ದ ನಾರದ ಮಹರ್ಷಿಗಳು ಆತನನ್ನು ಮಾತಿನ ಬಲೆಯಲ್ಲಿ ಸಿಲುಕಿಸಿದರು. ತಮ್ಮ ವಿವೇಕ ಚಿಂತನವಾಣಿಗಳಿಂದ ಬೇಡನ ಮನ ಮಡಿ ಮಾಡಿದರು. ಮುಚ್ಚಿದ್ದ ಅವನ ಒಳಗಣ್ಣು ತೆರೆಸಿದರು. 'ಬದುಕು ಎಂದರೆ ಕೇವಲ ಕೌಟುಂಬಿಕ ಸೇವೆಯಲ್ಲ; ಕೇವಲ ಒಡಲು ತುಂಬುವ ಕೆಲಸವಲ್ಲ. ಬದುಕು ಇರುವುದು ಲೋಕದ ಉದ್ಧಾರಕ್ಕೆ, ಆತ್ಮದ ಉದ್ಧಾರಕ್ಕೆ. ಮಾನವ ಮಾಧವನಾಗುವುದಕ್ಕೆ, ಆ ಶಿವ ಮುಖದಿಂದ ಶಿವಮುಖದತ್ತ ಸಾಗುವುದಕ್ಕೆ, ಮಿಗಿಲಾಗಿ ಲೋಕ ಕಲ್ಯಾಣಕ್ಕೆ' ಎಂದು ಸಾರಿದರು. ಬೇಡನ ಎದೆಯಲ್ಲಿ ಆಧ್ಯಾತ್ಮದ ನಂದಾ ದೀಪವನ್ನು ಹಚ್ಚಿದರು. ನಾರದರ ಸಹವಾಸ ಬೇಡನ ಬದುಕಿನಲ್ಲಿ ದೊಡ್ಡ ವಿಶ್ವಾಸ ಮೂಡಿಸಿತು.

ನಾರದರ ಮಾರ್ಗದರ್ಶನದಲ್ಲಿ ಜ್ಞಾನೋದಯಗೊಂಡ ವಾಲ್ಮೀಕಿ ಮುನಿವರ್ಯರಿಗೆ ಆಧ್ಯಾತ್ಮದ ಹಸಿವು ಹೆಚ್ಚಿತು.

* ಸಾಹಿತಿಗಳು, ಕ್ಯಾತ್ಸಂದ್ರ, ತುಮಕೂರು







ದೇವರನ್ನು ಕಾಣುವ ಹೆಬ್ಬಯಕೆ ಮೂಡಿತು. ಮನೆ ತೊರೆದರು. ಎಲ್ಲರನ್ನೂ ಎಲ್ಲವನ್ನೂ ಮರೆತರು. ಕಠಿಣವಾದ ತಪಸ್ಸು ಮಾಡಿದರು. ಇಹದ ಅರಿವನ್ನೇ ಅರಿಯದಾದರು. ಕುಳಿತಲ್ಲಿಯೇ ಅಚಲರಾಗಿ ಕುಳಿತರು. ಹಸಿವು-ಬಾಯಾರಿಕೆಗಳನ್ನು ಮರೆತರು. ಮೈಮೇಲೆ ಹುತ್ತ ಬೆಳೆಯಿತು. ದಿನಗಳು ಉರುಳಿದವು. ಋತುಗಳು ಮರಳಿದವು. ತಪಸ್ಸು ಫಲ ನೀಡಿತು. ಸಾಧಕನಿಗೆ ಸಿದ್ಧಿಯಾಯಿತು. ಕಡೆಗೆ ಭಗವಂತನ ಕರುಣೆಗೆ ಪಾತ್ರರಾದರು. ಹೊಸ ಬೆಳಕನ್ನು ಕಂಡುಕೊಂಡರು. ಮಹರ್ಷಿ ನಾರದರೆ ಬಂದು ಯೋಗ ನಿದ್ರೆಯಿಂದ ಎಚ್ಚರಿಸಿದರು. ವಾಲ್ಮೀಕಿ ಮುನಿಗಳು ಕಣ್ಣು ತೆರೆದರು. ಹುತ್ತದಿಂದ ಹೊರಬಂದರು. ವಲ್ಮೀಕದಲ್ಲಿ ಕುಳಿತ ನವಜನ್ಮವೆತ್ತಿದ ಅವರಿಗೆ 'ವಾಲ್ಮೀಕಿ'ಗಳೆಂಬ ಹೆಸರು ಬಂದಿತು. ಜೊತೆಗೆ ಮಹರ್ಷಿಗಳೆಂಬ ಪದವೂ ಬಂದು ಕೂಡಿತು. ಅಂದಿನಿಂದ ಅವರು ಧ್ಯಾನ, ಮೌನ, ಚಿಂತನ, ಭಗವದಾರಾಧನೆಯಲ್ಲಿ ಬದುಕನ್ನು ಸವೆಸಿದರು. ವಾಲ್ಮೀಕಿ ಮಹರ್ಷಿಗಳೆಂಬ ಅಭಿಧಾನಕ್ಕೆ ಪಾತ್ರರಾದರು. ಲೋಕಕ್ಕೆ ಇಂದು ಶಕ್ತಿಯಾಗಿ ವಿರಾಜಿಸಿದರು.

ಒಮ್ಮೆ ತ್ರಿಲೋಕ ಸಂಚಾರಿಗಳೂ, ಬ್ರಹ್ಮನ ಮಾನಸ ಪುತ್ರರೂ ಆದ ನಾರದ ಮಹರ್ಷಿಗಳು ವಾಲ್ಮೀಕಿಮುನಿಗಳ ಆಶ್ರಮಕ್ಕೆ ಬಂದರು. ವಾಲ್ಮೀಕಿ ಮಹರ್ಷಿಗಳು ತುಂಬು ಹೃದಯದಿಂದ ಸ್ವಾಗತಿಸಿದರು. ಪ್ರೀತ್ಯಾದರಗಳಿಂದ ಉಪಚರಿಸಿದರು. ಭಗವಂತನ ಹಿರಿಮೆ ಗರಿಮೆಗಳನ್ನು ಕುರಿತು ಚಿಂತನೆ ನಡೆಸಿದರು. ಕಡೆಗೆ ವಾಲ್ಮೀಕಿಗಳು ನಾರದರನ್ನು ಕುರಿತು. 'ಪೂಜ್ಯರೇ, ಈಗ ಲೋಕದಲ್ಲಿ ಸಕಲ ಕಲ್ಯಾಣಗುಣಗಳನ್ನು ಒಳಗೊಂಡ ಸತ್ಯಸಂಧನೂ, ಧರ್ಮಜ್ಞನೂ, ದಯಾಪರನೂ, ವಿದ್ಯಾವಂತನೂ, ಪರಮ ಪಾವನನೆನಿಸಿದ ನಿತ್ಯ ನಿರ್ಮಲನೂ ಎನಿಸಿದ ಮಹಾನುಭಾವ ನುಂಟೆ? ಹಾಗೊಮ್ಮೆ ಇದ್ದಲ್ಲಿ ಆ ಮಹಾಮಾನವನ ಹೆಸರೇನು? ಆತ ಎಲ್ಲಿರುವನು? ಆ ಪುರುಷೋತ್ತಮನ ಬಗ್ಗೆ ತಿಳಿಯಲು ಕುತೂಹಲವಾಗಿದೆ. ಕೃಪೆ ಮಾಡಿ ತಿಳಿಸುವಿರಾಗಿ' ಎಂದು ವಿನಂತಿಸಿದರು. ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿನ ವಿಷಯವನ್ನು ಅರುಹಲು ಸಮರ್ಥರಾದ ನಾರದ ಮುನಿಗಳು ಆ ಪ್ರಶ್ನೆಯಿಂದ ಆನಂದಗೊಂಡರು. ಅಂತರ್ದೃಷ್ಟಿಯಿಂದ ನೋಡಿ, 'ವಾಲ್ಮೀಕಿ ಮಹರ್ಷಿಗಳೇ, ತಾವು ಕೇಳಿದ ಗುಣವಿಶೇಷಗಳಿಂದ ಕೂಡಿದ ವ್ಯಕ್ತಿಗಳಿರುವುದು ದುರ್ಲಭವೇ ಸರಿ. ಆದರೆ, ಪುಣ್ಯವಿಶೇಷದಿಂದ ಅಂತಹ ಪುರುಷೋತ್ತಮನೋರ್ವ ಇದ್ದಾನೆ. ಆತನ ಹೆಸರು ಶ್ರೀರಾಮ, ವೈವಸ್ವತ ಮನುವಿಗೆ ಹಿರಿಯ ಪುತ್ರನೆನಿಸಿದ ಇಕ್ಷ್ವಾಕು ವಂಶದಲ್ಲಿ ಜನಿಸಿದವನು. ಅವನಲ್ಲಿ ನೀವು ಅಪೇಕ್ಷಿಸಿದ ಸರ್ವ ಗುಣಗಳು ಸಮಾವೇಶಗೊಂಡಿವೆ. ಸ್ವಯಂಪ್ರಕಾಶನಾದ ಶ್ರೀರಾಮನು ಉಜ್ವಲನಾದ ತೇಜಸ್ವಿಯಾಗಿದ್ದಾನೆ. ಗಾಂಭೀರ್ಯ ದಲ್ಲಿ ಸಾಗರಕ್ಕೂ, ಧೈರ್ಯದಲ್ಲಿ ಹಿಮವತ್‌ಪರ್ವತಕ್ಕೂ ಸಮಾನ ನಾಗಿದ್ದಾನೆ. ಪುರುಷೋತ್ತಮನಾದ ಆತ ಚರಿತ್ರಾರ್ಹನಾಗಿದ್ದಾನೆ. ಆ ಮಹಾಮಹಿಮನ ಕಥೆಯನ್ನು ಹೇಳುವುದೂ ಪುಣ್ಯ, ಕೇಳುವುದೂ ಪುಣ್ಯ' ಎಂದು ಹೇಳಿದರಲ್ಲದೆ ಸರ್ವಪಾಪವನ್ನು ನೀಗಿ, ಅಖಿಲ ಪುಣ್ಯವನ್ನು ನೀಡುವ ಶತಕೋಟಿ ವಿಸ್ತಾರವಾದ ಶ್ರೀರಾಮ ಚಂದ್ರನ ದಿವ್ಯಕಥೆಯನ್ನು ಸಂಕ್ಷೇಪಿಸಿ ಹೇಳಿದರು. ಮಹರ್ಷಿ ವಾಲ್ಮೀಕಿಗಳು ಮೈಯೆಲ್ಲಾ ಕಿವಿಯಾಗಿಸಿಕೊಂಡು ಕೇಳಿದರು. ಹೃನ್ಮನಗಳ ತುಂಬಾ ತುಂಬಿಕೊಂಡರು. ಅಮಿತವಾದ ಆನಂದವನ್ನು ಪಟ್ಟರು. ನರೋತ್ತಮನ ದಿವ್ಯಕಥೆಯನ್ನು ಹೃತ್ಸ್ಪರ್ಶಿಯಾಗಿ ಹೇಳಿದ ನಾರದ ಮಹರ್ಷಿಗಳಿಗೆ ಕೃತಜ್ಞತೆಗಳನ್ನು ಸಲ್ಲಿಸಿ, ಆದರದಿಂದ ಬೀಳ್ಕೊಟ್ಟರು.

ಶ್ರೀರಾಮನ ದಿವ್ಯಕಥೆಯನ್ನು ಕೇಳಿ ಪುಳಕಿತರಾದ ವಾಲ್ಮೀಕಿ ಮುನಿಗಳು ಆಶ್ರಮದಲ್ಲಿ ಮುಹೂರ್ತಕಾಲ ಉಳಿದರು. ಮಧ್ಯಾಹ್ನದ ಆಹ್ನಿಕ ಕ್ರಿಯೆಗಾಗಿ ತಮಸಾ ನದಿಯ ತೀರದಲ್ಲಿದ್ದ ಸ್ನಾನಘಟ್ಟವನ್ನು ಅರಸುತ್ತಾ ಹೊರಟರು. ಗುರುವರ್ಯರ ಸಂಗಡ ಕಮಂಡಲ, ನಾರು ಬಟ್ಟೆಯನ್ನು ಹಿಡಿದ ಭರದ್ವಾಜ ಎಂಬ ಶಿಷ್ಯನೂ ಹೊರಟನು. ಗುರುಗಳು ಮುಂದೆ ಶಿಷ್ಯನು ಹಿಂದೆ ಮೌನವಾಗಿ ಮುನ್ನಡೆದರು.

ತಮಸಾ ನದಿ ಮಂಜುಳವಾದ ಕಲರವ ಮಾಡುತ್ತ ಹರಿಯುತ್ತಿತ್ತು. ಮರಗಿಡಗಳು ಮುಗಿಲು ಮುಟ್ಟುವಂತೆ ಬೆಳೆದಿದ್ದವು. ಅರಳಿದ ನಾನಾ ಬಗೆಯ ಕುಸುಮಗಳು ಸುಗಂಧ ಸೂಸುತ್ತಿದ್ದವು. ಗಾಳಿ ಹಿತವಾಗಿ ತೀಡುತ್ತಿತ್ತು] ಇಡೀ ವನವೆಲ್ಲಾ ಶಾಂತಿಧಾಮವಾಗಿ ಮೌನ ತಾಳಿತ್ತು. ತಿಳಿಯಾಗಿ ಹರಿಯುವ ನದಿಯ ನೀರನ್ನು ನೋಡಿದ ವಾಲ್ಮೀಕಿಗಳು ಶಿಷ್ಯನನ್ನು ಕುರಿತು, 'ಓ ಭರದ್ವಾಜ, ತಮಸಾ ನದಿಯ ನೀರನ್ನು ನೋಡು, ಸತ್ಪುರುಷರ ಮನಸ್ಸಿನಂತೆ ಎಷ್ಟು ನಿರ್ಮಲವಾಗಿರುವುದು! ನಾನು ಇಂದು ಇಲ್ಲಿಯೇ ಸ್ನಾನ ಮಾಡುವೆ. ಕಮಂಡಲವನ್ನು ಇಡು, ನಾರುಡುಗೆಯನ್ನು ಕೊಡು' ಎಂದು ನುಡಿದು, ನಿಂತಲ್ಲೇ ಪ್ರಕೃತಿಯ ಸೊಬಗನ್ನು ವೀಕ್ಷಿಸುತ್ತಾ ನಿಂತರು. ಅಲ್ಲಿ ಎರಡು ಕ್ರೌಂಚ ಪಕ್ಷಿಗಳು ಒಗ್ಗೂಡಿ, ಲಾಸ್ಯೋಲ್ಲಾಸದಲ್ಲಿ ಮುಳುಗಿ, ಹಾರಾಡುತ್ತಿರುವ ಭಾವಭಂಗಿಗಳಿಂದ ವಾಲ್ಮೀಕಿಗಳ ಮನವನ್ನು ತಮ್ಮತ್ತ ಸೆಳೆಯುವಲ್ಲಿ ಯಶಸ್ವಿಯಾದುವು. ಕೊಕ್ಕರೆಗಳ ಕೂಜನ ಕರ್ಣಾನಂದಕರವಾಗಿತ್ತು. ಗಂಡು-ಹೆಣ್ಣು ಕೂಡಿ ಕ್ಷಣಕಾಲವೂ ನಾವು ಅಗಲಿ ಬಾಳೆವು ಎಂದು ಹೇಳುವಂತೆ ಒಗ್ಗೂಡಿ ನಲಿಯುತ್ತಿದ್ದವು. ಆ ಪಕ್ಷಿಗಳ ನಲಿದಾಟವನ್ನು ಮಹರ್ಷಿಗಳು ನೋಡುತ್ತಿರುವಂತೆಯೇ ಆಗಬಾರದ ಅನಾಹುತವಾಯಿತು. ವೈರನಿಲಯನಾದ ಬೇಡನೋರ್ವನು ಆ ಕ್ರೌಂಚ ಜೋಡಿಗಳಲ್ಲಿ ಗಂಡುಪಕ್ಷಿಗೆ ಬಾಣವನ್ನು ಹೂಡಿ, ಗುರಿಯಿಟ್ಟು ಹೊಡೆದನು. ಬಾಣ ನೆಟ್ಟು ಕೆನ್ನೆತ್ತರು ಉಕ್ಕಿ ಹರಿಯಿತು. ಪೆಟ್ಟಿನಿಂದ ಜರ್ಜರಿತವಾಗಿ ತೊಪ್ಪನೆ ನೆಲದ ಮೇಲೆ ಉರುಳಿತು. ರಕ್ತದಿಂದ ನೆನೆದ ಪಕ್ಷಿ ವಿಲವಿಲನೆ ಒದ್ದಾಡಿತು. ಸಾವಿನ ಅಂಚಿನಲ್ಲಿದ್ದು ಅಸಹನೀಯ ಸಂಕಟ ಪಡುತ್ತಿರುವ ಗಂಡು ಕ್ರೌಂಚದ ಅಸಹಾಯಕ ಸ್ಥಿತಿ ಕಂಡು ಹೆಣ್ಣು ಕ್ರೌಂಚ ರೋಧಿಸಿತು. ಕಂಡವರ ಎದೆ ಬಿರಿಯುವಂತಹ ಕರುಣಾಜನಕ ದೃಶ್ಯ ಅದಾಗಿತ್ತು. ಗಂಡು ಕೊಕ್ಕರೆಯ ದುಃಸ್ಥಿತಿ ಕಂಡು ಮಹಾತ್ಮರಾದ ವಾಲ್ಮೀಕಿ ಮುನಿಗಳ ಮನ ಮಮ್ಮಲು ಮರುಗಿತು. ಜೊತೆಯಲ್ಲೇ ಕರುಣೆಯೂ ಚಿಮ್ಮಿತು. ಪಕ್ಷಿಯನ್ನು ಕೊಂದ ಕಾರ್ಯವು ಅಮಾನವೀಯ ಎಂದೆನಿಸಿತು. ಸ್ವಧರ್ಮಚಾರಿ ಯಾದ ಬೇಡನು ಅಧರ್ಮಚಾರಿಯಾಗಿ ಕಂಡನು. ಮತ್ತೊಮ್ಮೆ ಪಕ್ಷಿಯ ದೈನ್ಯಸ್ಥಿತಿ ಕಂಡು ಮನಸ್ಸು ಕರುಣಾ ರಸ ಕಡಲಾಯಿತು. ಒಡನೆಯೆ ಮಹಾಮುನಿ ಬಾಯಿಂದ ಕವಿದ ಶೋಕವು ಶ್ಲೋಕರೂಪದ ಕಾವ್ಯವಾಣಿಯಾಗಿ ಹೊರ ಬಿದ್ದಿತು;







**ಮಾ ನಿಷಾದ ಪ್ರತಿಷ್ಠಾಮ್ ತ್ವಮಗಮಃ ಶಾಶ್ವತಿಃ ಸಮಾಃ ।**
**ಯ ತ್ಕ್ರೌಞ್ಚ ಮಿಥುನಾದೇಕಮವಧಿಃ ಕಾಮ ಮೋಹಿತಮ್ ॥**

'ಎಲೈ ಬೇಡನೇ, ಕಾಮಮೋಹಿತವಾದ ಕ್ರೌಂಚ ದಂಪತಿಗಳಲ್ಲಿ ಒಂದಾದ ಗಂಡು ಪಕ್ಷಿಯನ್ನು ಹೊಡೆದು ಕೊಂದೆ. ನಿನಗೂ ಕೂಡ ಬಾಳಿನಲ್ಲಿ ನೆಲೆಯಿಲ್ಲದಂತಾಗಲಿ'.

ಬೇಡನಿಗೆ ಶಾಪವನ್ನು ಕೊಟ್ಟದ್ದಾಯಿತು. ಆದರೆ ಶಾಪವಿತ್ತ ಮಹರ್ಷಿಗಳ ಮನದಲ್ಲಿ ಒಡನೆಯೆ ಶಾಪವೂ ಮೂಡಿತು. ಕ್ರೌಂಚಪಕ್ಷಿಯ ದುಃಖಕ್ಕೆ ಮರುಗಿ, ಶೋಕ ಪೀಡಿತನಾಗಿ ನಾನು ಎಂತಹ ಕೆಲಸ ಮಾಡಿಬಿಟ್ಟೆ? ನಾನೇಕೆ ಬೇಡನಿಗೆ ಶಾಪ ಕೊಟ್ಟೆ? ಕೋಪಕ್ಕೆ ನಾನೇಕೆ ವಶನಾದೆ? ಎಂದು ಮರುಗಿದರು. ಕ್ಷಣಕಾಲ ಬಿಟ್ಟು ಪ್ರಿಯಶಿಷ್ಯ ಭರಧ್ವಾಜನನ್ನು ಕುರಿತು, 'ಹೆಣ್ಣುಹಕ್ಕಿಯ ಸಂಕಟ ಕಂಡು ಶೋಕಪೀಡಿತನಾದೆನು. ನನ್ನ ಬಾಯಿಂದ ಆಗ ಹೊರಬಿದ್ದ ವಾಣಿಯು ನಾಲ್ಕು ಪಾದಗಳಿಂದ ಕೂಡಿದೆ. ಸಮಾಕ್ಷರವುಳ್ಳದ್ದಾಗಿದೆ. ಪ್ರಾಸಬದ್ಧವಾಗಿದೆ. ತಂತಿವಾದ್ಯಗಳೊಡನೆ ಹಾಡಲು ಯೋಗ್ಯವಾಗಿದೆ. ಮಿಗಿಲಾಗಿ ಲಯಬದ್ಧವಾದ ಶ್ಲೋಕವಾಗಿದೆ ಅಲ್ಲವೇ?' ಎಂದು ಹೇಳಿದರು. ಒಡನೆಯೇ ಶಿಷ್ಯ ಬರೆದುಕೊಂಡ. ಕಂಠಪಾಠ ಮಾಡಿದ. ಶೋಕದ ವಾತಾವರಣದಲ್ಲೂ ಒಂದು ಬಗೆಯ ಆನಂದ ಕಂಡ. ಮನವನ್ನು ಕದಡಿದ ಶೋಕವು, ಶ್ಲೋಕರೂಪವಾಗಿ ಅಭಿವ್ಯಕ್ತಗೊಂಡ ಮೇಲೆ ಮಹರ್ಷಿಗಳ ಮನವು ತಿಳಿಯಾಯಿತು. ನದಿಯಲ್ಲಿ ಮಿಂದು, ನಾರುಡಿಗೆಯುಟ್ಟು ಆಶ್ರಮದ ಕಡೆಗೆ ಮರಳಿದರು.

ಅಂದು ವಾಲ್ಮೀಕಿಗಳ ಮನಸ್ಥಿತಿ ಎಂದಿನಂತಿರದೆ ಬೇರೊಂದು ಬಗೆಯದಾಗಿತ್ತು. ಕ್ರೌಂಚಪಕ್ಷಿಯ ವಧೆಯಾದಾಗ ಅಪ್ರಯತ್ನಪೂರ್ವಕವಾಗಿ ಮೂಡಿ ಬಂದ ಶ್ಲೋಕವು ಮತ್ತೆ ಮತ್ತೆ ಅನುರಣಗೊಳ್ಳುತ್ತಿತ್ತು. ಆ ಪ್ರಸಂಗವನ್ನೇ ಕುರಿತು ಚಿಂತನ ಮಂಥನ ನಡೆಸುತ್ತಿರುವಾಗ ಸೃಷ್ಟಿ ಕರ್ತನಾದ ಬ್ರಹ್ಮದೇವನು ಬಂದನು. ಆಯಾಚಿತವಾಗಿ ಬಂದ ಚತುರ್ಮುಖನನ್ನು ಮುನಿಯು ಪ್ರೀತ್ಯಾದರಗಳಿಂದ ಸ್ವಾಗತಿಸಿ, ಯಥೋಚಿತ ಸತ್ಕಾರ ಮಾಡಿ ವಂದಿಸಿದನು. ಬ್ರಹ್ಮದೇವನು ಮಹರ್ಷಿಯ ಅಂತರ್ಗತವಾದ ವಿಷಯ ತಿಳಿದು ಸಂತಸಗೊಂಡನು. ನಂತರ ವಾಲ್ಮೀಕಿ ಮುನಿವರರನ್ನು ಉದ್ದೇಶಿಸಿ, 'ಮಹರ್ಷಿಯೇ ನನ್ನಯ ಅನುಗ್ರಹದಿಂದಲೇ ನಿನ್ನಲ್ಲಿ ಶ್ಲೋಕರೂಪವಾದ ಸಕಲ ಗುಣಭರಿತನಾದ ಶ್ರೀರಾಮನ ದಿವ್ಯಕಥೆಯನ್ನು ರಚಿಸುವವನಾಗು. ಈ ಹಿಂದೆಯೇ ನಾರದರು ಹೇಳಿದ ಶ್ರೀರಾಮನ ದಿವ್ಯಚರಿತೆಯು ನಿನ್ನಂತರಂಗವನ್ನು ತುಂಬಿಕೊಂಡಿದೆ. ಆ ಮಹಾನುಭಾವನ ಕಥೆಯನ್ನು ಶ್ಲೋಕರೂಪವಾಗಿ ರಚಿಸು. ನಿನಗೆ ಮಹಾಯಶಸ್ಸಿ ಲಭಿಸುವುದು, 'ನಿನ್ನಿಂದ ರಚಿಸಲ್ಪಟ್ಟ ಆ ಮಹಾಕಾವ್ಯವು, ಈ ಧರೆಯ ಮೇಲೆ ಎಲ್ಲಿಯವರೆವಿಗೂ ಗಿರಿಪರ್ವತಗಳು, ನದಿ-ನದಗಳೂ ಇರುತ್ತವೆಯೋ ಅಲ್ಲಿಯವರೆಗೂ ಪ್ರಚಾರದಲ್ಲಿರುತ್ತದೆ' ಎಂದು ತುಂಬು ಮನದಿಂದ ಹರಸಿದನು. ಹರ್ಷಚಿತ್ತನಾದ ವಾಲ್ಮೀಕಿ ಮುನಿವರನು ನಾಲ್ಮೊಗನನ್ನು ಸತ್ಕರಿಸಿ ಆದರದಿಂದ ಬೀಳ್ಕೊಟ್ಟನು.

ಮಹರ್ಷಿ ನಾರದಮುನಿಗಳು ಬಿತ್ತಿದ ರಾಮಬೀಜವು ಬ್ರಹ್ಮದೇವರ ಕೃಪಾಶೀರ್ವಾದದಿಂದ ಮಹಾಮುನಿ ವಾಲ್ಮೀಕಿಗಳ ಅಂತರಂಗದಲ್ಲಿ ಕಾವ್ಯವಾಣಿಯಾಗಿ ಮೊಳೆಯಿತು. ಯೋಗಮಾರ್ಗದಿಂದ ಆ ಮಹಾಕವಿಯ ಕೈಯಲ್ಲಿ ಮಹಾ ಕಾವ್ಯದ ಸಲ್ಲಕ್ಷಣಗಳನ್ನು ಒಳಗೊಂಡಿತು. ಶ್ರೀರಾಮಚಂದ್ರನ ದಿವ್ಯಚರಿತೆಯು 'ಶ್ರೀ ಮದ್ರಾಮಾಯಣ'ವೆಂಬ ಹೆಸರಿನಿಂದ ರೂಪುಗೊಂಡಿತು. ಪರಮಪಾವನವಾದ ಆ ಮಹಾಕಾವ್ಯವಾದ ಶ್ರೀ ಮದ್ರಾಮಾಯಣ ರಚಿಸಿದ ವಾಲ್ಮೀಕಿ ಮಹಾ ಮುನಿ ವರನು 'ಆದಿಕವಿ' ಎನಿಸಿದನು. ಲೋಕಪೂಜ್ಯನು ಎಂದು ವಿಖ್ಯಾತನಾದನು.

ಕವಿಯ ಮಹಾಕಾವ್ಯವು ನವರಸಭರಿತವಾಗಿದೆ. ಮಾನವೀಯ ಮೌಲ್ಯಗಳು ಮಡುಗಟ್ಟಿ ನಿಂತಿವೆ. ರೂಪುಗೊಂಡಿರುವ ಪಾತ್ರಗಳು ಸಹಜ ಸುಂದರವಾಗಿವೆ. ಅಮೂಲ್ಯವಾದ ಜೀವನ ಸಂದೇಶ ನೀಡಿದೆ. ಬದುಕಲು ದಾರಿ ತೋರಿದೆ. ರಾಮಾಯಣ ಸುಖದ ಸೋಪಾನವಾಗಿದೆ. ಭಕ್ತಿ-ವಿರಕ್ತಿ-ಮುಕ್ತಿಗಳ ಸಂಗಮವಾಗಿದೆ. ಪುರುಷನಾದ ರಾಮನು ಪುರುಷೋತ್ತಮನಾಗಿ ಉನ್ನತ ಸ್ತರವೇರಿ ವಿರಾಜಿಸಿದ್ದಾನೆ. ಹಾಗೆಯೇ ಕಪಿಯಾದ ಹನುಮ, ಅಸುರನಾದ ವಿಭೀಷಣ, ಪಕ್ಷಿಯಾದ ಜಟಾಯು, ಮುಗ್ಧ ಭಕ್ತೆ ಯಾದ ಶಬರಿ-ಹೀಗೆ ಅನೇಕರು ಅಲ್ಪರಾದರೂ ಶ್ರೀರಾಮನ ಎತ್ತರಕ್ಕೆ ಏರಿ ಮಹಾಕಲ್ಪನಾಗಿ ವಿರಾಜಿಸಿದ್ದಾರೆ. ಮಾನವರೇನು ಪಕ್ಷಿ-ಪ್ರಾಣಿಗಳೂ ಸಹ ಉದ್ಧಾರವಾಗುವ ದಾರಿ ತೋರಿದೆ. ಕವಿಯ ಮಹಾಪ್ರತಿಭೆಗೆ ವಿಜ್ಞಾನಿಯೂ ಕೂಡ ಬೆಕ್ಕಸ ಬೆರಗಾಗುತ್ತಾನೆ. ಸುಜ್ಞಾನಿ ತಲೆದೂಗುತ್ತಾನೆ. ಜಗತ್ತಿನಲ್ಲಿರುವುದೆಲ್ಲಾ ರಾಮಾಯಣದಲ್ಲಿದೆ. ರಾಮಾಯಣದಲ್ಲಿ ಇದ್ದದ್ದು ಜಗತ್ತಿನಲ್ಲಿ ಇಲ್ಲ ಎಂದರೆ ಅತಿಶಯೋಕ್ತಿಯಾಗದು. ಮಹಾಕವಿ ವಾಲ್ಮೀಕಿ ಮಹರ್ಷಿಗಳು ವಿರಚಿಸಿದ ಶ್ರೀರಾಮನ ದಿವ್ಯಚರಿತೆಯು ಮನ-ಮನೆಗಳಲ್ಲಿ ಬೆಳಗುವ ನಂದಾದೀಪ. ಬದುಕನ್ನು ಸಾರ್ಥಕಗೊಳಿಸುವ ಹಂಬಲ ಹುಟ್ಟಿಸುವ ಆಶಾರೂಪ.

ಶ್ರೀಮದ್ರಾಮ್ಮಾಣವು ರೂಪುಗೊಳ್ಳಲು ಈ ಪುಣ್ಯ ಭೂಮಿ ಪಾವನವಾಯಿತು. ಭರತಮಾತೆ ಧನ್ಯಳಾದಳು. ಜಗನ್ಮಾತೆ ಮಾನ್ಯಳಾದಳು. ಮಾನವಕೋಟಿ ಪರಮಪಾವನ. ಹಿಂದೂಧರ್ಮ ವಿಶ್ವಮಾನ್ಯವಾಯಿತು. ಕತ್ತಲಿನಿಂದ ಬೆಳಕಿ ನಡೆಗೆ, ಮೃತ್ಯುಮುಖದಿಂದ ಅಮೃತತ್ವದ ಕಡೆಗೆ, ಅಜ್ಞಾನದಿಂದ ಸುಜ್ಞಾನದೆಡೆಗೆ ಕೈಹಿಡಿದು ನಡೆಸುವ ಶ್ರೀಮದ್ರಾಮಾಯಣ ಮಹಾಕಾವ್ಯಕ್ಕೆ ನಮಸ್ಕಾರ. ಆದಿಕಾವ್ಯವನ್ನು ರಚಿಸಿ ಭಾರತೀಯ ಸಂಜಾತರೆನ್ನೇನು, ವಿಶ್ವದ ಆಸ್ತಿಕರೆಲ್ಲ ರನ್ನು ಕೈಹಿಡಿದು ಮುನ್ನಡೆಸುವ ಕವಿಕೋಟಿಯ ಮೇಟಿ ವಾಲ್ಮಿಕಿ ಮಹರ್ಷಿಗಳಿಗೆ ನಮಸ್ಕಾರ. ವಾಲ್ಮೀಕಿ ವಚನ ರಾಮಾಯಣದ ಕೃತಿಗಳನ್ನು ಮನೆಮನಗಳಿಗೆ ಮುಟ್ಟಿಸಲು ಮುಂದಾದ ಪುಣ್ಯಜೀವಿಗಳಿಗೆ ನಮಸ್ಕಾರ. ರಾಮಾಯಣವನ್ನು ಪಾರಾಯಣ ಮಾಡಲು ಮುಂದಾಗುವ ಭಕ್ತಕೋಟಿಗೆ ನಮಸ್ಕಾರ. ವಾಲ್ಮೀಕಿ ಮಹಾಮುನಿಗಳಿಗೆ ಅನಂತಾನಂತ ನಮಸ್ಕಾರಗಳು.

■

ಚಿಂತನ

# ವಚನ ಸಾಹಿತ್ಯದ ಪ್ರಸ್ತುತತೆ

– ಡಾ॥ ನೀಲಮ್ಮ ಕತ್ನಳ್ಳಿ *

ಪ್ರಸ್ತುತ ದಿನಮಾನಗಳಲ್ಲಿ ಮಾನವನ ಬದುಕು ಕ್ಷಣ ಕ್ಷಣಕ್ಕೂ ಅವನತಿಯತ್ತ ಸಾಗುತ್ತಿದೆ. ಸತ್ಯ-ಧರ್ಮ-ಅಹಿಂಸೆಗೆ ಹೆಸರಾದ ನಮ್ಮ ದೇಶದಲ್ಲಿಯೇ ಹಿಂಸೆ ತಾಂಡವವಾಡುತ್ತಿದೆ. ಪ್ರತಿ ಹಂತದಲ್ಲಿಯೂ ನಮ್ಮ ಸಂಸ್ಕೃತಿಯ ಅಧಃಪತನವಾಗುತ್ತಿದೆ. ಮಾನವ ಮೇಲ್ನೋಟಕ್ಕೆ ಸುಖಿಯಾಗಿರುವಂತೆ ಕಂಡರೂ, ಆಂತರಿಕವಾಗಿ ಅಸುಖಿಯಾಗಿದ್ದಾನೆ. ದುಶ್ಚಟ, ದುರ್ವ್ಯಸನಗಳ ದಾಸನಾಗಿ, ಮಾನಸಿಕ ಶಾಂತಿ-ನೆಮ್ಮದಿಗಳನ್ನು ಕಳೆದುಕೊಳ್ಳುತ್ತಿದ್ದಾನೆ. ನಿಜವಾದ ಸಂತೋಷ ಬಾಹ್ಯ ವಸ್ತುಗಳಿಂದ ದೊರೆಯುವುದಿಲ್ಲ. ಅದು ನೆಲೆಗೊಳ್ಳುವುದು ಅಂತರಂಗದ ಶುದ್ಧ ನಡವಳಿಕೆಯಿಂದ. ಆಂತರಂಗಶುದ್ಧಿ ಅಪರೂಪವಾಗುತ್ತಿರುವ ಇಂದಿನ ದಿನಮಾನಗಳಲ್ಲಿ ಮಾನವ ಒಂದರ್ಥದಲ್ಲಿ ಮಾನಸಿಕ ರೋಗಿಯಾಗಿರುತ್ತಾನೆ.

ಸಮಕಾಲೀನ ಸಮಾಜದಲ್ಲಿ ಬದುಕುತ್ತಿರುವ ಮಾನವನ ನೋವುಗಳಿಗೆ ಲೆಕ್ಕವಿಲ್ಲ. ಆತ ಎದುರಿಸುತ್ತಿರುವ ಸಮಸ್ಯೆಗಳೂ ವೈವಿಧ್ಯಮಯ. ಅಲ್ಲದೇ ಜೀವನ ಮೌಲ್ಯ ಗಳ ಕುಸಿತವೇ ಎಲ್ಲೆಡೆ ವಿಜೃಂಭಿಸುತ್ತಿರುವಾಗ ಎಲ್ಲಾದರೊಬ್ಬ ಆದರ್ಶವ್ಯಕ್ತಿ, ಮೌಲ್ಯಗಳನ್ನೇ ನಂಬಿ ಬದುಕು ಸಾಗಿರುವುದು ಅಸಾಧ್ಯ! ಎನ್ನುವ ವಾತಾವರಣ ಸೃಷ್ಟಿ ಮುಗಿದೆ. ಸತ್ಯವಂತರ ಕಾಲವಿದಲ್ಲ! ಎಂಬ ಕಹಿ ಅನುಭವ.

ಹನ್ನೆರಡನೆಯ ಶತಮಾನದಲ್ಲಿ ಇಂಥ ಸಮಸ್ಯೆಗಳು ಇರಲಿಲ್ಲವೆಂದಲ್ಲ. ಇಂದಿಗಿಂತ ಹೆಚ್ಚಿನ ಸಮಸ್ಯೆಗಳು ಅವರ ಕಣ್ಮುಂದಿದ್ದವು. ಆದರೆ ಬಸವಾದಿ ಶರಣರು, ಆ ಸಮಸ್ಯೆಗಳಿಗೆ ಸ್ಪಂದಿಸಿದ ರೀತಿ, ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸಿದ ವಿಧಾನ ವಿಸ್ಮಯಕಾರಿಯಾಗಿತ್ತು. ಅವರು ಸಮಸ್ಯೆಗಳನ್ನು ಪರಿಹರಿಸಲು ಬುದ್ಧಿಯ ಜೊತೆಗೆ ಹೃದಯದ ಬಳಕೆ ಮಾಡಿಕೊಂಡರು. ಆತ್ಮಬಲವನ್ನು ಮೈಗೂಡಿಸಿಕೊಂಡು, ವಿದೇಶದಿಂದ ಸಮಸ್ಯೆಗಳನ್ನು ಪರಿಹರಿಸಿಕೊಂಡರು. ಹೀಗಾಗಿ ಅವರ ಅನುಭವದಿಂದ ಮೂಡಿಬಂದ ವಚನ ಸಾಹಿತ್ಯ ಸಮಕಾಲೀನವಾಗುವುದರೊಂದಿಗೆ, ಸಾರ್ವಕಾಲಿಕವೂ ಆಗಿ ಬಿಡುತ್ತದೆ.

ನಾವಿಂದು ಬಸವಾದಿ ಶರಣರ ತತ್ತ್ವಕ್ಕೆ ತದ್ವಿರುದ್ಧವಾಗಿ ವಾತಾವರಣದಲ್ಲಿ ಬದುಕುತ್ತಿದ್ದೇವೆ. ಗುಡಿ-ಗುಂಡಾರಗಳನ್ನು ಕಟ್ಟುವುದರಲ್ಲಿ-ಕೆಡಹುವುದರಲ್ಲಿ ನಿರತರಾಗಿದ್ದೇವೆ. ದೇವರು-ಧರ್ಮದ ಹೆಸರಲ್ಲಿ ಅಶಾಂತಿ-ಕೊಲೆ-ರಕ್ತಪಾತ ನಡೆದಿದೆ. ಯಜ್ಞ-ಯಾಗ-ಪಶುಬಲಿ ಮುಂದುವರೆದಿದೆ. ಅಧಿಕಾರಶಾಹಿ, ಭ್ರಷ್ಟರಾಜಕಾರಣ, ಜಾತಿ ವೈಷಮ್ಯಗಳು, ನಮ್ಮ ಸಾಮಾಜಿಕ ಪರಿಸರವನ್ನು ಮಲಿನಗೊಳಿಸಿವೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ನಮ್ಮ ನೂರಾರು ಸಮಸ್ಯೆಗಳಿಗೆ ಪರಿಹಾರ, ಬಸವಾದಿ ಶರಣರ ಆದರ್ಶಗಳ ಪಾಲನೆಯಲ್ಲಿ ಮಾತ್ರ ಸಿಗಲು ಸಾಧ್ಯ! ಎಂದು ಹೇಳಿದರೆ ತಪ್ಪಾಗದು.

ಇಂದಿನ ಬಡತನ- ನಿರುದ್ಯೋಗ ಸಮಸ್ಯೆಗಳಿಗೆ ಪರಿಹಾರ ಶರಣರ ಕಾಯಕ ದಾಸೋಹ ತತ್ತ್ವಗಳಲ್ಲಿದೆ. ಇಂದಿನ ಮತೀಯ ಸಂಘರ್ಷಕ್ಕೂ, ಗುಡಿ-ಗುಂಡಾರಗಳ ಹೆಸರಲ್ಲಿ ನಡೆದಿರುವ ಹಿಂಸಾಕೃತ್ಯಕ್ಕೂ ಪರಿಹಾರ ಶರಣರ ತತ್ತ್ವಗಳಲ್ಲಿಯೇ ಇದೆ. ಜೀವಂತ ದೇವಾಲಯಗಳಿಂತಿದ್ದ ನಮ್ಮ ಬಡ ಬಂಧುಗಳ ಕಡೆಗೆ ಲಕ್ಷ್ಯ ಕೊಡುವುದು ಮುಖ್ಯವಾಗಬೇಕು.

ಇನ್ನು ಮಹಾತ್ಮರ ಮೂರ್ತಿ ಪ್ರತಿಷ್ಠಾಪನೆಗಳೂ ಅರ್ಥ ಕಳೆದುಕೊಳ್ಳುತ್ತಿವೆ. ಆ ಮಹಾತ್ಮರ ಬಗ್ಗೆ ನಿಜವಾದ ಗೌರವ ನಮಗಿದ್ದರೆ, ಅವರಿಗೆ ನಮ್ಮ ಹೃದಯದಲ್ಲಿ ಸ್ಥಾನಕೊಟ್ಟು, ಅವರ ಆದರ್ಶಗಳನ್ನು ಆಚರಣೆಯಲ್ಲಿ ತರುವುದರ ಮೂಲಕ ಅವರಿಗೆ ಅರ್ಥಪೂರ್ಣವಾದ ಗೌರವ ಸಲ್ಲಿಸಬಹುದಾಗಿದೆ.

ಇತ್ತೀಚೆಗೆ ಮಾನವ ಸಂಬಂಧಗಳು ಕಡಿದು ಹೋಗುತ್ತಿವೆ. ಮೌಲ್ಯಗಳು ನಶಿಸಿ ಹೋಗುತ್ತಿವೆ. ಇದನ್ನು ತಡೆದು ಸಂಬಂಧ ಕುದುರಿಸುವ ಮಾನವೀಯ ಮೌಲ್ಯಗಳನ್ನು ಬೆಳೆಸುವ ನಿಟ್ಟಿನಲ್ಲಿ ನಾವು ಸಾಗಬೇಕಾಗಿದೆ.

ಈ ಕತ್ತಲೆ ತುಂಬಿದ ಬದುಕಿನಲ್ಲಿ, ಶರಣ ಸಾಹಿತ್ಯ ಬೆಳಕು ನೀಡಿ, ಮಾರ್ಗದರ್ಶಿಯಾಗಿ ಬರಬಲ್ಲದು. ಜಾತಿ-ವರ್ಗದ ಗೋಡೆಗಳನ್ನು ತೆಗೆದು ಹಾಕಿದಾಗಲೇ, ಸಂಪದ್ಭರಿತ ಸಮಾಜ ನಿರ್ಮಾಣ ಸಾಧ್ಯ! ಶರಣ ಸಾಹಿತ್ಯದ ಈ ಸಂದೇಶವನ್ನು ಮನೆಮನೆಗೆ ತಲುಪಿಸುವ ಕೆಲಸ ನಡೆಯ ಬೇಕಾಗಿದೆ.

ಎಲ್ಲ ಧರ್ಮಗಳ ಗುರಿ ಪ್ರೇಮ! ವಿಶ್ವಪ್ರೇಮ! ಎಲ್ಲರೂ ಇದನ್ನೇ ಸಾರಿದ್ದಾರೆ.

'ಇವನಾರವ ! ಇವನಾರವ ! ಇವನಾರವ ! ಎನ್ನದೇ ಇವನಮ್ಮವ ! ಇವನಮ್ಮವ ! ಇವನಮ್ಮವ ಎಂದು

ಎಲ್ಲರೂ ಒಗ್ಗಟ್ಟಾಗಿ! ಪ್ರೀತಿಸಿ! ಪ್ರೀತಿಯಿಂದ ಎಂಥ ಭಯೋತ್ಪಾದಕರನ್ನೂ ಪರಿವರ್ತಿಸಬಹುದು.

* ಶಹಾಬಾದ- ೫೮೫ ೨೨೮



ಸೆಪ್ಟೆಂಬರ್ ೫ ರಂದು ಶ್ರೀ ಸಿದ್ಧಗಂಗಾ ಮಠದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಶಿಕ್ಷಕರ ದಿನಾಚರಣೆಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಆಚರಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ನೌಕರರನ್ನು ಸನ್ಮಾನಿಸಲಾಯಿತು.

"……….. ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಲು ಆಂಗ್ಲ ಅಧಿಕಾರಿಗಳು ಪ್ರಾಮಾಣಿಕ ಪ್ರಯತ್ನ ಮಾಡಿ ಇತರರಿಗೆ ಮಾರ್ಗದರ್ಶಕರಾಗಿದ್ದಾರೆ. ಅವರು ಕನ್ನಡವನ್ನು ಕಲಿತು ಕನ್ನಡ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಆಡಳಿತದ ಎಲ್ಲಾ ಹಂತಗಳಲ್ಲಿಯೂ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಲು ಶ್ರಮಿಸಿದರು. ಅವರಲ್ಲಿ ಗೋರ್ಡನ್, ಥಾಮ್ಸನ್, ಕ್ಯಾಪ್ಟನ್ ಡಿಕ್ಸನ್, ಎಫ್.ಹೆಚ್.ಬಿ. ಗೋರ್ಡನ್, ಎ.ಜಿ.ಡಿ. ಲೋಗನ್, ಮೇಜರ್ ಹಿಲ್ಸ್, ಮ್ಯಾಕ್ ಹುಚೆನ್, ಪಿ.ಬಿ. ಕ್ಲಾರ್ಕ್, ರಿಕೆಟ್ಸ್ ಮೊದಲಾದವರು ಸೇರಿದ್ದಾರೆ. ಆಂಗ್ಲರ ಆಡಳಿತದಲ್ಲಿ ಕನ್ನಡವನ್ನು ಬಳಸುವುದು ಅಗತ್ಯವೆಂಬುದು ಆಂಗ್ಲ ಅಧಿಕಾರಿಗಳಿಗೆ ಮನವರಿಕೆಯಾಗಿತ್ತು. ೧೭೬೧ರಿಂದ ೧೮೨೭ರವರೆಗೆ ಅಧಿಕಾರಿಯಾಗಿದ್ದ ಸರ್ ಥಾಮಸ್ ಮನ್ರೋ ಪ್ರಾದೇಶಿಕ ಭಾಷೆಗಳ ಉದಾರದ ಬಗ್ಗೆ ಅತ್ಯಂತ ಆಸಕ್ತಿ ತೋರಿದ ಈತ ಕನ್ನಡ ಪ್ರದೇಶಗಳನ್ನೆಲ್ಲ ಒಂದೇ ಆಡಳಿತದಲ್ಲಿ ಒಟ್ಟುಗೂಡಿಸಬೇಕೆಂದು ಸೂಚಿಸಿದವರಲ್ಲಿ ಮೊದಲಿಗ. ನಂತರ ಬಂದ ಮಾರ್ಕ್ ವಿಕ್ಸ್, ಕಾಲಿನ್ ಮಕ್‌ಝಿ, ಬುಕಾರಿನ್, ಜಾನ್ ಮೆಕ್ಕರಲ್, ಮಾರ್ಕ್ ಕಬ್ಬನ್, ಲೆಲಿನ್ ಬೆಂಥಮ್ ಬೌರಿಂಗ್, ಬೆಂಜಮಿನ್ ಲೂಯಿಸ್ ರೈಸ್, ಎಲ್. ರಿಕೆಟ್ಸ್, ಟಿ.ಜಿ. ಕ್ಲಾರ್ಕ್, ಅರ್ಥರ್ ಹೆನ್ರಿ ಕೋಲ್ ಮೊದಲಾದವರು ಕನ್ನಡವನ್ನು ತಮ್ಮ ಆಡಳಿತದಲ್ಲಿ ಬಳಸಿದ ಅಧಿಕಾರಿಗಳು. ಈ ಅಧಿಕಾರಿಗಳ ದೃಢನಿಶ್ಚಯ, ಆಡಳಿತದಲ್ಲಿ ನಿಷ್ಠೆ, ಭಾಷೆಗಳ ಪ್ರೇಮ, ಜನತೆಯ ಆಶೋತ್ತರಗಳನ್ನು ಈಡೇರಿಸುವಲ್ಲಿ ಅವರು ತೋರಿದ ನಿಷ್ಠೆಯನ್ನು ಕಂಡ ಕನ್ನಡಿಗರು ತಲೆಯನ್ನು ತಗ್ಗಿಸಿದಂತಾಗಿದೆ. ಸಾವಿರಾರು ಮೈಲಿಗಳಿಂದ ಕರ್ನಾಟಕಕ್ಕೆ ಬಂದು ಹಾಗೂ ಕನ್ನಡವನ್ನು ಎಂದೂ ಅರಿಯದ ಆಂಗ್ಲ ಅಧಿಕಾರಿಗಳಿಂದ ಸಾಧ್ಯವಾದ ಆಡಳಿತಾತ್ಮಕ ಕನ್ನಡ ಬಳಕೆ ಇಂದು ಕನ್ನಡಿಗರೇ ಆದ ನಮಗೆ ಏಕೆ ಸಾಧ್ಯವಾಗುತ್ತಿಲ್ಲ?

– ಡಾ. ಮಹದೇವ ಬಣಕಾರ

"……………. ಸರಕಾರಗಳಾಗಲಿ, ವಿದ್ಯಾಭ್ಯಾಸ ಇಲಾಖೆಗಳಾಗಲಿ, ವಿಶ್ವವಿದ್ಯಾನಿಲಯಗಳಾಗಲಿ, ಇತರ ಸಾಂಸ್ಕೃತಿಕ ಸಂಸ್ಥೆಗಳಾಗಲಿ, ಕಡೆಗೆ ವ್ಯಾಪಾರ ವಾಣಿಜ್ಯಾದಿ ಸಂಸ್ಥೆಗಳಾಗಲಿ ದೇಶ ಭಾಷೆಗೇ ಮೊತ್ತಮೊದಲನೆಯ ಸ್ಥಾನ ಕೊಡಬೇಕು. ಹಾಗೆ ಮಾಡದಿದ್ದರೆ ಪ್ರಜಾಪ್ರಭುತ್ವದ ಬುಡದ ಬೇರಿಗೆ ಬೆನ್ನೀರೆರೆದಂತಾಗುತ್ತದೆ. ನಮ್ಮ ಭಾಷೆ ವಿದ್ಯಾಭ್ಯಾಸದ ಅತ್ಯುನ್ನತ ಮಟ್ಟಗಳಲ್ಲಿಯೂ ಶಿಕ್ಷಣ ಮಾಧ್ಯಮವಾಗಲು ಸಮರ್ಥವಾಗಿದೆ ಎನ್ನುವುದರ ಬಗೆಗೆ ಯಾರೂ ಸಂದೇಹ ಪಡಬೇಕಾಗಿಲ್ಲ."

– ರಾಷ್ಟ್ರಕವಿ ಕುವೆಂಪು

"……………. ನಮ್ಮ ಸಾಹಿತ್ಯ, ಇತಿಹಾಸ, ಸಂಸ್ಕೃತಿಯನ್ನು ನಾನು ದುರ್ಲಕ್ಷ್ಯ ಮಾಡಿದಷ್ಟು ಮುಂಬರುವ ಯಾವ ಜನಾಂಗವೂ, ರಾಷ್ಟ್ರವೂ ಮಾಡಿರಲಾರದು……….. ನಮ್ಮ ಸಾಹಿತ್ಯ ಸಂಸ್ಕೃತಿ, ಇತಿಹಾಸಗಳ ಸಂಜೀವವನ್ನುಣ್ಣದೆ ನಾವು ಕನ್ನಡಿಗರಾಗಲಾರೆವು ………… ಕನ್ನಡದ ಇಪ್ಪತ್ತೆಂಟು ಸಾವಿರ ಹಳ್ಳಿಗಳಿಗೆ ಸಾಹಿತ್ಯ, ಸಂಸ್ಕೃತಿ ಹೆಚ್ಚುವುದು ಎಂದು? ಕನ್ನಡ ನಾಡಿಗೇ ನಾಡೇ ಎಚ್ಚರದವುದು ಎಂದು?…"

– ವರಕವಿ ದ.ರಾ. ಬೇಂದ್ರೆ

## ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

**ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ಲಂಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೩೩೬. | ಶ್ರೀ ಪಿ.ಎಸ್. ಚಂದ್ರಣ್ಣ, ಮೈಸೂರು | ೫೦,೦೦೦ |
| ೨೩೩೭. | ಶ್ರೀ ಎಲ್. ಸೋಮಶೇಖರ್, ಬೆಂಗಳೂರು | ೧,೦೦,೦೦೦ |
| ೨೩೩೮. | ಶ್ರೀ ರೇವಣ್ಣ ಮತ್ತು ಕುಟುಂಬ, ಬೆಂಗಳೂರು | ೧,೦೦೫ |
| ೨೩೩೯. | ಶ್ರೀ ಕೆ.ಎನ್. ವೀರಣ್ಣ, ಬೆಂಗಳೂರು | ೧೦,೦೦೦ |
| ೨೩೪೦. | ಶ್ರೀ ಡಿ.ಎ. ಗೋಣಪ್ಪ, ಗುಡೇನಹಾಳ | ೧,೦೦೦ |
| ೨೩೪೧. | ಶ್ರೀ ಕರಿಸಿದ್ಧಯ್ಯ, ತಿಪಟೂರು | ೧,೦೦೦ |
| ೨೩೪೨. | ಶ್ರೀ ಹೆಚ್.ಸಿ. ಶಿವರುದ್ರಯ್ಯ, ಶ್ರೀ ಸಿದ್ಧಗಂಗಾಮಠ | ೫,೦೦೧ |
| ೨೩೪೩. | ಶ್ರೀಮತಿ ಜಿ. ದೀಪು, ಬಸವೇಶ್ವರ ಬಡಾವಣೆ, ಕ್ಯಾತ್ಸಂದ್ರ. | ೫,೦೦೧ |
| ೨೩೪೪. | ಶ್ರೀ ಮಲ್ಲಿಕಾರ್ಜುನ ಒಡೆಯರ್, ಬೆಟ್ಟಹಲಸೂರು | ೨,೦೦೦ |
| ೨೩೪೫. | ಶ್ರೀ ಕೆ.ಜಿ. ಮುರುಘೇಂದ್ರಪ್ಪ, ಭದ್ರಾವತಿ | ೧,೦೦೧ |
| ೨೩೪೬. | ಶ್ರೀ ಅನ್‌ಮೆಟ್ ಇಂಡಸ್ಟ್ರೀಸ್ ಪ್ರೈ.ಲಿ., ಬೆಂಗಳೂರು | ೫,೦೦೦ |
| ೨೩೪೭. | ಶ್ರೀ ಚಂದ್ರಶೇಖರಯ್ಯ, ಬೆಂಗಳೂರು | ೨,೦೦೦ |
| ೨೩೪೮. | ಶ್ರೀ ಸಿ.ಕೆ. ಮಂಜುನಾಥ, ಬೆಂಗಳೂರು | ೫,೦೦೧ |
| ೨೩೪೯. | ಶ್ರೀ ಬಿ.ಆರ್. ಶಿವಪ್ರಸನ್ನ, ಬ್ಯಾಲಕೆರೆ | ೨೫,೦೦೦ |
| ೨೩೫೦. | ಶ್ರೀ ಕೆ.ಕೆ. ಚಂದ್ರಶೇಖರ್, ಕಣವೇ | ೧,೦೦೦ |
| ೨೩೫೧. | ಶ್ರೀಮತಿ ಪಾರ್ವತಿ ಮಲ್ಲೇಶ್ ನೇರಗಲೆ, ರಾಯರಕೊಪ್ಪಲ್ | ೨,೦೦೦ |
| ೨೩೫೨. | ಶ್ರೀ ಬ್ರಹ್ಮಶ್ರೀ ರುದ್ರಾರಾಧ್ಯ ಮತ್ತು ಮಕ್ಕಳು, ಬೆಂಗಳೂರು | ೧,೦೦೦ |
| ೨೩೫೩. | ಶ್ರೀ ಡಿ.ಎನ್. ನಂಜುಂಡಯ್ಯ, ಬೆಂಗಳೂರು | ೧,೦೦೦ |
| ೨೩೫೪. | ಶ್ರೀ ಎನ್. ಶ್ರೀಕಂಠಮೂರ್ತಿ, ಮೈಸೂರು | ೨,೦೦೦ |
| ೨೩೫೫. | ಶ್ರೀ ಹಾಲಸಿದ್ದೇಗೌಡ, ಹಾಸನ | ೧,೦೦೦ |
| ೨೩೫೬. | ಶ್ರೀ ಬಿ.ಎಂ. ಬಸವರಾಜು, ಬೀರಗೌಡನಹಳ್ಳಿ | ೧,೦೦೦ |
| ೨೩೫೭. | ಶ್ರೀ ಡಿ.ಬಿ. ಚಂದ್ರಶೇಖರಪ್ಪ, ಚಿಕ್ಕಪಟ್ಟಣಗೆರೆ | ೨,೦೦೨ |
| ೨೩೫೮. | ಶ್ರೀ ಕೆ.ಹೆಚ್. ನಾರಾಯಣರೆಡ್ಡಿ, ತುಮಕೂರು | ೨,೦೦೦ |
| ೨೩೫೯. | ಶ್ರೀ ಕೆ.ಟಿ. ಹನುಮಂತಯ್ಯ, ಬೆಂಗಳೂರು | ೧,೦೦೦ |
| ೨೩೬೦. | ಶ್ರೀ ಕಿರಣ್‌ಕುಮಾರ್ ಪಾಟೀಲ್, ಬೆಂಗಳೂರು | ೧೦,೦೦೦ |
| ೨೩೬೧. | ಶ್ರೀ ಕೆ. ನಾಗರಾಜಚಾರ್, ತುಮಕೂರು | ೯,೫೦೦ |
| ೨೩೬೨. | ಶ್ರೀ ಎಸ್. ಚನ್ನಬಸವಯ್ಯ, ನಾಗನಹಳ್ಳಿ | ೨,೦೦೦ |
| ೨೩೬೩. | ಶ್ರೀ ಬಸವರಾಜು ಎಂ. ಬೆಳಮಗಿ, ಹಿರೇಳಿ | ೨,೧೧೧ |
| ೨೩೬೪. | ಶ್ರೀ ದಿಲೀಪ್ ಧರ್ಮಪ್ಪ, ಬೆಂಗಳೂರು | ೫೦,೦೦೦ |
| ೨೩೬೫. | ಶ್ರೀ ಕೆ. ಬಸವರಾಜಪ್ಪ, ಸುರಹೊನ್ನೆ | ೧,೦೧೧ |
| ೨೩೬೬. | ಶ್ರೀ ಸಿ. ಚನ್ನಬಸವಯ್ಯ, ತಾಳಗುಂದ | ೩,೦೦೦ |
| ೨೩೬೭. | ಶ್ರೀ ಮಂಜುನಾಥ ವೀರಭದ್ರಪ್ಪ ಸೂಡಿ, ಕೊರಡಕೆರ | ೫೦೦ |
| ೨೩೬೮. | ಶ್ರೀ ನರಸೀಯಪ್ಪ, ಕ್ಯಾತಸಂದ್ರ | ೧,೦೦೧ |
| ೨೩೬೯. | ಶ್ರೀ ಜೆ. ಕರಿಬಸಪ್ಪ, ಶಿವಮೊಗ್ಗ | ೧,೦೦೦ |
| ೨೩೭೦. | ಶ್ರೀ ಬಾಸೂರು ಕುಮಾರಸ್ವಾಮಿ, ಬೆಂಗಳೂರು | ೧,೦೦೧ |
| ೨೩೭೧. | ಶ್ರೀ ಎಂ.ಎನ್. ಶ್ರೀನಿವಾಸ, ಮಂಚೇನಹಳ್ಳಿ | ೨,೦೦೧ |
| ೨೩೭೨. | ಶ್ರೀ ಶಕುಂತಲ ಜಯದೇವ್, ಮೈಸೂರು | ೧೦,೦೦೦ |

(ಮುಂದುವರೆಯುತ್ತದೆ)

"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102

RNI No. 17139/69





# ಸಿದ್ಧಗಂಗಾ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರ

**ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ರಸ್ತೆ, (ಬಿ.ಹೆಚ್. ರಸ್ತೆ), ತುಮಕೂರು**

**Ph: 0816-6602222 | Emergency No. : 6602288 | 6602299**

**E: info@siddagangahospital.com**

## ವೈದ್ಯಕೀಯ ಸೌಲಭ್ಯಗಳು




### ಸೂಪರ್ ಸ್ಪೆಷಾಲಿಟಿ ಸೌಲಭ್ಯಗಳು

- ನ್ಯೂರಾಲಜಿ ಮತ್ತು ನ್ಯೂರೋಸರ್ಜರಿ
- ಕಾರ್ಡಿಯಾಲಜಿ ಮತ್ತು ಸಿ.ಟಿ.ವಿ.ಎಸ್
- ಮೆಡಿಕಲ್ ಮತ್ತು ಸರ್ಜಿಕಲ್ ಗ್ಯಾಸ್ಟ್ರೋಎಂಟರಾಲಜಿ
- ಮೆಡಿಕಲ್ ಮತ್ತು ಸರ್ಜಿಕಲ್ ಆಂಕೊಲಜಿ
- ನೆಫ್ರಾಲಜಿ ಮತ್ತು ಯುರಾಲಜಿ
- ಡಯಬಿಟಾಲಜಿ ಮತ್ತು ಎಂಡೋಕ್ರೈನಾಲಜಿ
- ಪಲ್ಮನಾಲಜಿ • ರುಮಟಾಲಜಿ
- ಪ್ಲಾಸ್ಟಿಕ್ ರಿಕನ್‌ಸ್ಟ್ರಕ್ಟೀವ್ ಮತ್ತು ಕಾಸ್ಮೆಟಿಕ್ ಸರ್ಜರಿ
- ಜೆರಿಯಾಟ್ರಿಕ್ ಮೆಡಿಸಿನ್

### ತುರ್ತು ಚಿಕಿತ್ಸಾ ಸೇವೆಗಳು

- ಅಪಘಾತ, ತುರ್ತು ಚಿಕಿತ್ಸೆ ಮತ್ತು ಕ್ರಿಟಿಕಲ್ ಕೇರ್
- ಎಮ್.ಐ.ಸಿ.ಯು., ಐ.ಸಿ.ಸಿ.ಯು., ನ್ಯೂರೋ ಐ.ಸಿ.ಯು., ಎಸ್.ಐ.ಸಿ.ಯು., ಎನ್.ಐ.ಸಿ.ಯು., ಪಿ.ಐ.ಸಿ.ಯು
- ಕ್ಯಾಥ್ ಲ್ಯಾಬ್ ಸೇವೆಗಳು
- ಡಯಾಲಿಸಿಸ್ ಸೇವೆಗಳು
- ಡಯಾಗ್ನೋಸ್ಟಿಕ್ ಸೇವೆಗಳು
- ಇಂಟರ್‌ವೆನ್ಷನಲ್ ರೇಡಿಯಾಲಜಿ
- ಸಿ ಟಿ ಸ್ಕ್ಯಾನ್ – 16 ಸ್ಲೈಸ್
- ರಕ್ತ ನಿಧಿ ಮತ್ತು ಕಾಂಪೊನೆಂಟ್ಸ್
- ಆಂಬ್ಯುಲೆನ್ಸ್ ಸೇವೆಗಳು • ಔಷಧಾಲಯ

### ಇತರೆ ಸೌಲಭ್ಯಗಳು

- ಇಂಟರ್ನಲ್ ಮೆಡಿಸಿನ್
- ಮನೋವೈದ್ಯಕೀಯ ಸೇವೆಗಳು
- ಜನರಲ್ ಮತ್ತು ಲ್ಯಾಪರೊಸ್ಕೋಪಿಕ್ ಸರ್ಜರಿ
- ಬೆರಿಯಾಟ್ರಿಕ್ ಮತ್ತು ಮೆಟಾಬಾಲಿಕ್ ಸರ್ಜರಿ
- ಆರ್ಥೋಪೆಡಿಕ್ ಮತ್ತು ತುರ್ತು ಅಪಘಾತ ಚಿಕಿತ್ಸೆ
- ಎಂಡೋಸ್ಕೋಪಿ, ಕೊಲೊನೋಸ್ಕೋಪಿ ಮತ್ತು ಇ.ಆರ್.ಸಿ.ಪಿ
- ನಿಯೋನೇಟಾಲಜಿ, ಪೀಡಿಯಾಟ್ರಿಕ್ಸ್ ಮತ್ತು ಪೀಡಿಯಾಟ್ರಿಕ್ ಸರ್ಜರಿ
- ಪ್ರಸೂತಿ ಮತ್ತು ಸ್ತ್ರೀ ರೋಗ ಚಿಕಿತ್ಸೆ
- ಫೀಟಲ್ ಮೆಡಿಸಿನ್ • ಐ.ವಿ.ಎಫ್ ಕೇಂದ್ರ • ಇ.ಎನ್.ಟಿ.
- ನೇತ್ರ ಚಿಕಿತ್ಸೆ • ಡರ್ಮಟಾಲಜಿ
- ದಂತ ಚಿಕಿತ್ಸೆ ಮತ್ತು ಮ್ಯಾಕ್ಸಿಲೋಫೇಶಿಯಲ್ ಸರ್ಜರಿ
- ಮಿನಿಮಲಿ ಇನ್‌ವೇಸಿವ್ ಸರ್ಜರಿ ಮತ್ತು ಫಂಡೋಪ್ಲಿಕೇಷನ್

To

If undelivered please return to :
Editor
Siddaganga Monthly Magazine
Siddaganga Math
Tumkur-572 104

email ID : geetanjaligraphics@gmail.com